

ಮುಟ್ಟಬೇಡಿ ಮುಟ್ಟಬೇಡಿ ಮುರಹರನ ದಾಸರನು
ಕಟ್ಟು ಮಾಡಿದನಂತೆ ಯಮ ತನ್ನ ದೂತರಿಗೆ

ತಿರುಮಣ್ಣು ತಿರುಚೂರ್ಣ ಪೂರ್ಣ ದ್ವಾದಶನಾಮ
ಸಿರಿ ತುಳಸಿ ವನಮಾಲೆ ಕೊರಳೊಳಗಿಪ್ಪವರ
ತಿರುಮಂತ್ರ ತೀರ್ದ ಪ್ರಸಾದ ಕೊಳಗಾದವರ
ತಿರುಪತಿಯ ಯಾತ್ರೆಯನು ಮಾಡಿದ ಮಹಾತ್ಮರನು

ಬಡವನಾಗಲಿ ಅವ ಬಲ್ಲಿದನು ಆಗಲಿ
ಕಡುಮೂರ್ಖ ಘೋರ ಪಾತಕಿಯಾಗಲಿ
ನುಡಿ ನುಡಿಗೆ ಮಾದವನ ಬಿಡದೆ ಕೊಂಡಾಡುವರ
ಗೊಡವೆ ಬೇಡೆಂದ ಯಮ ತನ್ನ ದೂತರಿಗೆ

ವಾಸುದೇವಾ ಎಂಬ ವಾಕ್ಯವನು ಪಠಿಸುವರ
ಬೇಸರದೆ ಶ್ರೀ ಹರಿಯ ಧ್ಯಾನದೊಳಗಿಪ್ಪವರ
ವಾಸುಕಿಶಯನ ಕಾಗಿನೆಲೆಯಾದಿಕೇಶವನ
ದಾಸರಾ ದಾಸರಾ ದಾಸನೆಂತೆಂಬವರ

---ಶ್ರೀ ಕನಕದಾಸರು.

ಸಂದರ್ಶಿಸಿ. ಆನಂದಿಸಿ.

# ಶ್ರೀ ಕಪಿಲೇಶ್ವರ ಸ್ವಾಮಿ ದೇವಾಲಯ
# ತಿರುಪತಿ.

# ವಾರ್ಷಿಕ ತೆಪ್ಪೋತ್ಸವ

5--1--93 ರಿಂದ 7--1--93 ವರೆಗೆ

| | |
|---|---|
| 5--1--93 ಮಂಗಳವಾರ | ಶ್ರೀ ವಿಘ್ನೇಶ್ವರ, ಶ್ರೀ ಚಂದ್ರಶೇಖರ ಸ್ವಾಮಿಯವರ ತೆಪ್ಪೋತ್ಸವ |
| 6--1--93 ಬುಧವಾರ | ಶ್ರೀ ಸುಬ್ರಹ್ಮಣ್ಯ ಸ್ವಾಮಿಯ ತೆಪ್ಪೋತ್ಸವ |
| 7--1--93 ಗುರುವಾರ | ಶ್ರೀ ಕಪಿಲೇಶ್ವರಸ್ವಾಮಿಯ ತೆಪ್ಪೋತ್ಸವ |

ಕಪಿಲತೀರ್ಥದಲ್ಲಿ ಧನುರ್ಮಾಸದಲ್ಲಿ ನಡೆಯುವ ವಾರ್ಷಿಕ ತೆಪ್ಪೋತ್ಸವಗಳು ನಯನಾನಂದಕರವಾದವು. ಕಪಿಲ ತೀರ್ಥ ತಿರುಪತಿಯಿಂದ ಅಲಿಪಿರಿಗೆ ಹೋಗುವ ದಾರಿಯಲ್ಲಿದೆ

ತಾವೂ ಬನ್ನಿ. ತಿ. ತಿ. ದೇ. ತಮ್ಮವರನ್ನೂ ಕರೆತನ್ನಿ.

ಸಂದರ್ಶಿಸಿ. ಆನಂದಿಸಿ.

# ಶ್ರೀ ಗೋವಿಂದರಾಜಸ್ವಾಮಿ ದೇವಾಲಯ
# ತಿರುಪತಿ.
# ವಾರ್ಷಿಕ ತೆಪ್ಪೋತ್ಸವ

2--2--93 ರಿಂದ 6--2--93 ವರೆಗೆ

| | |
|---|---|
| 2--2--93 ಮಂಗಳವಾರ | ಶ್ರೀ ಕೋದಂಡರಾಮಸ್ವಾಮಿ ತೆಪ್ಪೋತ್ಸವ |
| 3--2--93 ಬುಧವಾರ | ಶ್ರೀ ಕೃಷ್ಣ, ಶ್ರೀ ಆಂಡಾಳ್ ಅಮ್ಮನವರ ತೆಪ್ಪೋತ್ಸವ |
| 4--2--93 ಗುರುವಾರ | ಶ್ರೀ ಗೋವಿಂದರಾಜಸ್ವಾಮಿಯವರ ತೆಪ್ಪೋತ್ಸವ |
| 5--2--93 ಶುಕ್ರವಾರ | ಶ್ರೀ ಗೋವಿಂದರಾಜಸ್ವಾಮಿಯವರ ತೆಪ್ಪೋತ್ಸವ |
| 6--2--93 ಶನಿವಾರ | ಶ್ರೀ ಗೋವಿಂದರಾಜಸ್ವಾಮಿಯವರ ತೆಪ್ಪೋತ್ಸವ |

ಶ್ರೀ ಗೋವಿಂದರಾಜಸ್ವಾಮಿ ದೇವಾಲಯ ಪುಷ್ಕರಿಣಿ ತಿರುಪತಿಯ ರೈಲ್ವೆ ನಿಲ್ದಾಣದ ಬಳಿಯಲ್ಲಿ ದೇವಾಲಯದ ಸಮೀಪದಲ್ಲಿದೆ ಮಾಘಮಾಸದಲ್ಲಿ ಪೂರ್ಣಿಮೆಯ ಸಮಯದಲ್ಲಿ ನಡೆಯುವ ತೆಪ್ಪೋತ್ಸವಗಳು ಆಕರ್ಷಕ, ಆತ್ಮತೃಪ್ತಿ ಕರ.

ನೀವೂ ಬನ್ನಿ. ತಿ. ತಿ. ದೇ. ನಿಮ್ಮವರನ್ನೂ ಕರೆತನ್ನಿ.




ಗೌರವ ಸಂಪಾದಕರು

ಶ್ರೀ ಎಂ ವಿ ಎಸ್ ಪ್ರಸಾದ್, ಐ ಎ ಎಸ್.,

ಕಾರ್ಯನಿರ್ವಹಣಾಧಿಕಾರಿ

ತಿ ತಿ ದೇ, ತಿರುಪತಿ

ಸಂಪಾದಕ

ಕೆ ಸುಬ್ಬಾರಾವ್ರು ಎಂ ಎ

ಉಪಸಂಪಾದಕ

ಬಿ ಎನ್ ಶ್ರೀನಿವಾಸನ್ ಎಂ ಎ,

ಮುದ್ರಣ

ಎಂ ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ

ಮಿಕ್ಕ ವಿವರಗಳಿಗೆ

ಸಂಪಾದಕರು,

ತಿರುಮಲೆ ತಿರುಪತಿ ದೇವಸ್ಥಾನಗಳು,

ತಿರುಪತಿ

---

ಸಪ್ತಗಿರಿಯ ಎಲ್ಲ ಛಾಪೆಯ ಪ್ರತಿಗಳೂ

ಎಲ್ಲ ತಿ ತಿ ದೇ ವಿಚಾರಣಾಕೇಂದ್ರಗಳಲ್ಲಿ

ದೊರೆಯುವುವು.

---

**ಬಿಡಿ ಪ್ರತಿ ೧--೦೦**

**ವಾರ್ಷಿಕ ಚಂದಾ ೧೨--೦೦**

---

ಸಪ್ತಗಿರಿಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಸಂಪಾದಕ ವರ್ಗದ, ಪತ್ರಿಕೆಯ, ಅಭಿಪ್ರಾಯಗಳೇ ಆಗಿರಬೇಕು ಎಂದಿಲ್ಲ ---ಸಂ||



ಸಂಪುಟ ೨೩] (ಡಿಸೆಂಬರ್ ೧೯೯೨) [ಸಂಚಿಕೆ ೭


# ವಿಷಯಸೂಚಿ



---

ಮುಖಚಿತ್ರ ಶ್ರೀ ದತ್ತಾತ್ರೇಯ, ಚಿತ್ರ --- ಶ್ರೀವತ್ಸ
ಹಿಂಬದಿಯಲ್ಲಿ ಗೀತೋಪದೇಶ, ಚಿತ್ರ --- ಶ್ರೀ ದಕ್ಷಿಣಾಮೂರ್ತಿ
ಒಳಗಡೆ ಕೃಷ್ಣಾನದೀ ಪುಷ್ಕರಗಳು




ಭಗವದ್ಗೀತೆಯ ಬಗ್ಗೆ ಭಾವನೆಗಳು ಹಲವಾರು ಏಳುನೂರು ಶ್ಲೋಕಗಳನ್ನು ಯುದ್ಧ ಭೂಮಿಯ ಎರಡು ಸೇನೆಗಳ ಮಧ್ಯೆ ನಿಂತ ಕ್ಷಣದಲ್ಲಿ ಹೇಳಲು ಕೇಳಲು, ಕೇಳಿ ತಿಳಿಯಲು ಸಾಧ್ಯವೇ ಎಂಬುದರಿಂದ ಹಿಡಿದು, ಅದೊಂದು ದೊಡ್ಡ ಆಲದಮರ ಸೂರ್ಯನ ಕೆಳಗೆ ಇರುವುದೆಲ್ಲ ಅಲ್ಲಿ ಹಿಡಿಸತ್ತೆ ಎಂಬುದರವರೆಗೆ, ಒಂದು ಕಡೆಯ ಭಾವವಾದರೆ ಇನ್ನೊಂದು ಕಡೆಯಲ್ಲಿ ಅದೊಂದು ಬುದ್ಧಿ ಸತ್ವವಷ್ಟೆ ಭಾವ ಸತ್ವವಾಗುವುದು ಕಷ್ಟ ಎಂದೂ, ಪೂರ್ಣಸ್ಥಿತಪ್ರಜ್ಞೆ ಎಂಬುದು ಒಂದು ಆದರ್ಶಮಾತ್ರವೇ ಎಂಬುದೂ, ಇನ್ನೊಂದು ಕಡೆ ಅದು ನಮಗಲ್ಲ ಜೀವನದಲ್ಲಿ ಅನುಭವಗಳಿಸಿದ ಮೇಲ ಅದರ ಯೋಚನೆ ಮಾಡಬೇಕು ಎಂಬುದು -- ಹೀಗೆ ಹಲವಾರು ಸ್ತರಗಳಲ್ಲಿ ಹಲವಾರು ಅಭಿಪ್ರಾಯಗಳು ಕಾಲದಿಂದ ಹೊರ ಬೀಳುತ್ತಲೇ ಇವೆಯಾದರೂ ಭಗವದ್ಗೀತೆಯನ್ನು ಅನುಸರಿಸಿ ಬೆಳಕು ಕಾಣುವ ಪ್ರಯತ್ನ ಪಡುವ ಜನವೇನು ಕಡಮೆಯಲ್ಲ ಅವರೆಲ್ಲರೂ ಅನಕ್ಷರಿಗಳೂ ಅಲ್ಲ

ಬಹುಮಂದಿ ಭಗವದ್ಗೀತೆಯನ್ನು ಅನುಸರಿಸಲು ಪ್ರಯತ್ನಿಸುತ್ತಿದ್ದಾರೆ ಅದರಿಂದ ಜೀವನವನ್ನು ಮೇಲ್ಮಟ್ಟಕ್ಕೆ ಏರಿಸಿಕೊಳ್ಳಲು ದಾರಿ ಹುಡುಕುತ್ತಿದ್ದಾರೆ ಎಂಬುದರಿಂದಲೇ ಅದರಲ್ಲಿ ಯಾತರದೊ ಒಂದು ರೀತಿಯ ಹುರುಳು ಇರಬೇಕು ಎನ್ನುವ ಅನುಮಾನ ಮೂಡಿ ಬರಬೇಕು ಸತ್ವವಿಲ್ಲದ ಸಾಹಿತ್ಯ ಬದುಕಿ ಬರಲಾರದು ಎಂಬುದು ಅದರ ದೀರ್ಘ ಇತಿಹಾಸದಿಂದ ತಿಳಿದು ಅದು ಯಾವುದೋ ಒಳ ಶಕ್ತಿಯನ್ನು, ಸಾರ್ವಕಾಲಿಕ ಸತ್ವವನ್ನು ಒಳಗೊಂಡಿರಬೇಕು ಎಂಬ ನಿರ್ಧಾರವನ್ನು ಮೂಡಿಸಬೇಕು ಅದಾದ ಮೇಲೆ ಅದರಲ್ಲಿ ಏನಿದೆ ಒಮ್ಮೆ ನೋಡುವ ಎಂಬ ಸಹಜ ಕುತೂಹಲ ಮೂಡಬೇಕು ಹೀಗಾದಾಗ ಪೂರ್ವಗ್ರಹಗಳಗೆ ತಡೆ ಬಿದ್ದು ಗೀತೆಯ ಗುಟ್ಟಿನತ್ತ ತಡವರಿಸುವುದು ಸರಿಯಾಗುತ್ತದೆ

ಸಮುದ್ರದ ದಡದಲ್ಲಿ ನಿಂತ ಮಾತು ಈಜುಬಿದ್ದ ಮಾತ್ರಕ್ಕೆ ಆಳದ ಅರಿವಾಗುವುದೇ? ರುಂದ್ರ ಸ್ತಾಗರವನ್ನು ಈಸಿದವರೆಷ್ಟು ಮಂದಿ ಇಲ್ಲ ಅವರಿಗೆಲ್ಲ ಆಳದ ಪರಿಚಯವಾಗಿದೆಯೇ? ಕುಂಗ ಒಳಕ್ಕಿಳಿದರೆ ತಾನೆ ಮುತ್ತು ರತ್ನಗಳು ದೊರೆಯುವ ಸಂಭವಗಳು ಅಲ್ಲಿ ಈಸಬೇಕು ಎಂಬುದು ವೈಶಾಲ್ಯದ ವಿಜ್ಞತೆಗಾದರೆ, ಇಳಿಯಬೇಕು ಎಂಬುದು ಆಳದ, ಸೂಕ್ಷ್ಮದ, ಬೆಳಕಿಗೆ ಎನ್ನುವುದನ್ನು ಮನಗಾಣಬೇಕು

ಗೀತಾಜಯಂತಿ ಪ್ರತಿ ವರ್ಷ ನಡೆಯುತ್ತದೆ ಗೀತೆಯ ಮೇಲ್ಮೆಯ ಉದ್ಘೋಷಕ್ಕೆ ಒಂದು ಮುಹೂರ್ತ ಎಂಬುದು ಎಂತದೂ ಇಲ್ಲವಾದರೂ, ಇಲ್ಲಿ ಅದರ ಅಗತ್ಯವನ್ನು ಸಾ ಮೂಹಿಕವಾಗಿ ಸಾರುವ ಪ್ರಯತ್ನವಿದೆ

ಗೀತೆ ವ್ಯಕ್ತಿಗೂ ಸಮಾಜಕ್ಕೂ ಇರಬಹುದಾದ ಸಂಬಂದದಲ್ಲಿ ವ್ಯಕ್ತಿಯ ಮುನ್ನಡೆಗೆ ತಕ್ಕ ಹಾದಿಯನ್ನು ಹಾಕಿದೆ ಎಂದವರುಂಟು 'ಅವನನ್ನು ನಂಬಿದರೆ ಸಾಕು' ಎಂದವರೂ ಉಂಟು ಎಲ್ಲವೂ ಪರಿಣಾಮಕಾರಿಯಾಗುವುದು ಒಮ್ಮೆಯಾದರೂ ಓದಿದರೆ, ತಿಳಿದರೆ ಎಂಬುವ ಸತ್ಯವನ್ನು ಮರೆಯಲಾಗದು

ಭಾರತದಂತಹ ಬಹುಸಂಖ್ಯಾತ ಅನಕ್ಷರಸ್ಥರ ನಾಡಿನಲ್ಲಿ ಗೀತೆಯನ್ನು ಓದಬೇಕು ಎಂದರೆ? ಓದಲೇ ಬೇಕೆಂದಿಲ್ಲ, ಕೇಳಿಯೂ ತಿಳಿಯಬಹುದು ಅದನ್ನು ಮೊದಲು ಕೇಳಿದವನು ಅರ್ಜುನ ಎರಡನೆಯವ ಗಣಪತಿ -- ಇಬ್ಬರೂ ಓದಿದರು ಎಂದು ಎಲ್ಲೂ ಹೇಳಿಲ್ಲವಾಗಿ ತಿಳಿದವರಿಂದ ಕೇಳಿ ಪಡೆಯುವುದೇ ಚೆನ್ನ

ಇಂತಲ್ಲಿ ಗೀತಾ [illegible]ಯಣ ವಿವರಣ-ಹೆಚ್ಚಿ, ಶ್ರೋತೃವರ್ಗ ಬೆಳೆಯಲಿ, ಅಲ್ಲಿಂದ ದೊರೆಯ ಬೆಳಕಿನಲ್ಲಿ ಅಂತರಂಗದ ದೀಪ ಮೂಡಿಬರಲಿ ಎಂದು

ಓಂ ಶಾಂತಿಃ ಶಾಂತಿಃ ಶಾಂತಿಃ

# ಭಗವದ್ಗೀತೆಯ ಧ್ಯಾನಯೋಗ

ಕಂದಾಡೈ ಕೇಶವನ್

ಭಗವದ್ಗೀತೆಯು ಪವಿತ್ರವಾದ ವೇದಾಂತಗ್ರಂಥ ಪಾವನಕ್ಕೆ ಅತಿ ಪಾವನವಾದ ಕೃತಿ ಪರಮ ಪುರುಷನಾದ ಪುಂಡರೀಕಾಕ್ಷವದನಾರವಿಂದದಿಂದ ಬಂದ ಶ್ರುತಿ ಸ್ಮೃತಿಗೆ ಮಿಗಿಲಾದ ಯೋಗಸಾದನೆಯ ಗ್ರಂಥ ಅನೇಕ ಮಹನೀಯರು ಪಂಡಿತರು ಶಾಸ್ತ್ರಜ್ಞರು, ಆಚಾರ್ಯರು ತಮ್ಮ ತಮ್ಮ ಅನುಭವ ಪ್ರತಿಬೆಗಳಿಗೆ ತೋರುವ ದೃಷ್ಟಿಕೋನದಿಂದ ಭಗವದ್ಗೀತೆಗೆ ಅರ್ಥವಿನ್ಯಾಸ ವ್ಯಾಖ್ಯಾನಗಳನ್ನು ಬರೆದಿದ್ದಾರೆ

ಭಗವದ್ಗೀತೆಯ ಆರನೆಯ ಅದ್ಯಾಯ ದ್ಯಾನಯೋಗ ಗೀತೆಯ ಹಿಂದಿನ ಐದು ಅದ್ಯಾಯಗಳಲ್ಲಿ ಸಾಂಖ್ಯಯೋಗ, ಕರ್ಮಯೋಗ ಜ್ಞಾನಯೋಗ ಕರ್ಮ ಸಂನ್ಯಾಸಯೋಗಗಳನ್ನು ಸ್ವಾಮಿ ಉಪದೇಶ ಮಾಡಿದಮೇಲೆ, ಆರನೆಯ ಅಧ್ಯಾಯ ದ್ಯಾನಯೋಗ ಗೀತೆಯ ಹಿಂದಿನ ಅದ್ಯಾಯದಲ್ಲಿ ಪ್ರಸ್ತಾಪವಾದ ವಿಷಯವನ್ನೇ ಇಲ್ಲಿ ಮುಂದುವರಿಸುತ್ತಾನೆ

ಕೇನೋಪನಿಷತ್ತಿನ ವಾಕ್ಕು --

"ತಸ್ಯೇ, ತಪೋ, ದರ್ಮಃ ಕರ್ಮೇತಿ ಪ್ರತಿಷ್ಠಾ
ವೇದಾ ಸ್ಸರ್ವಾಂಗಾನಿ
ಸತ್ಯಮಾಯ ತನಂ ಯೋವಾ
ಏತಾ ಮೇವಂ ವೇದಾಪಹತ್ಯ
ಪಾಪ್ಮಾನಮನಂತೇ
ಸ್ವರ್ಗಲೋಕೇ ಜ್ಯೇಯೇ ಪ್ರತಿಷ್ಠತಿ ಪ್ರತಿರಕ್ಷತಿ"

ಆ ತತ್ವವು ತಪ ದಮ ಕರ್ಮಗಳಲ್ಲಿ ಪ್ರತಿಷ್ಠಿತವಾಗಿದೆ ವೇದಗಳೇ ಸರ್ವ ಅಂಗಗಳು ಸತ್ಯವೇ ಜ್ಞಾನ ಎಂಬುವ ಉಪನಿಷತ್ತಿನ ವಾಕ್ಯಕಾರ, ಭಗವಂತನನ್ನು ತಲಪಬೇಕಾದರೆ ತಪ ದ್ಯಾನ ಯೋಗ ಅವಶ್ಯಕ ಎನ್ನುತ್ತಾರೆ ಯಾಮುನಾಚಾರ್ಯರು ತಮ್ಮ ಶ್ರೀಗೀತಾರ್ಥ ಸಂಗ್ರಹದಲ್ಲಿ--

"ಯೋಗಾಭ್ಯಾಸ ವಿದಿ ರ್ಯೋಗೀ
ಚತುರ್ದಾ ಯೋಗ ಸಾಧನಂ
ಯೋಗಸಿದ್ಧಿಃ ಸ್ವಯೋಗಸ್ಯ
ಪಾರಮ್ಯಂ ಷಷ್ಠ ಉಚ್ಯತೇ"

ಯಾಮುನರು (೧) ಯೋಗಾಭ್ಯಾಸ ವಿಧಿಃ ಈ ಆತ್ಮ ದ್ಯಾನರೂಪವಾದ ಯೋಗದ ಅಭ್ಯಾಸವನ್ನು ಪ್ರಾರಂಭಮಾಡಲು ಸ್ಥಿತಿ ಯಾವುದು ಎಂಬುವುದನ್ನು ಆರನೆಯ ಅಧ್ಯಾಯಡ ೭ನೇ ಶ್ಲೋಕ, ಸ್ಥಳ ಆಸನಾದಿಗಳನ್ನು ೧೧ ಹಾಗೂ ೧೨ ನೆಯ ಶ್ಲೋಕಗಳಲ್ಲಿ ಬೋಧಿಸಿ, ಆ ಯೋಗವು ನಿರಂತರವಾಗಿ ಚ್ಯುತಿಯಿಲ್ಲದ ಮುಂದುವರಿಯಲು ಏನು ಮಾಡಬೇಕೆಂಬುದನ್ನು ೧೪, ೧೫, ೧೬ ಶ್ಲೋಕಗಳು ಹೇಳುತ್ತವೆ ಎಂಬುವುದಾಗಿ ವ್ಯಾಖ್ಯಾನ ಮಾಡಿದ್ದಾರೆ ಸ್ವಾಮಿ ದ್ಯಾನಯೋಗದ ಏಳನೆಯ ಶ್ಲೋಕದಲ್ಲಿ ಯೋಗಾರಂಬ ಯೋಗ ಅವಸ್ಥೆ ಹೇಳುವಾಗ

"ಜಿತಾತ್ಮನಃ ಪ್ರಶಾಂತಸ್ಯ
ಪರಮಾತ್ಮಾ ಸಮಾಹಿತಃ
ಶೀತೋಷ್ಣೇ ಸುಖ ದುಃಖೇಷು
ತಥಾ ಮಾನಾವಮಾನಯೋಃ"

ಯಾರು ಶಾಸ್ತ್ರ ಜನ್ಯ ವಿವೇಕಯುಕ್ತನಾದ ಜ್ಞಾನವನ್ನು ತನ್ನ ಧರ್ಮಭೂತಜ್ಞಾನದಿಂದ ಮನಸ್ಸನ್ನು ನಿಗ್ರಹಿಸುವನೋ ಅವನ ಮನಸ್ಸು ಬಂದುವು, ಹಾಗೆ ಮಾಡದವನಿಗೆ ಶತ್ರುವು. ಹೀಗೆ ಮನಸ್ಸನ್ನು ಆತ್ಮಾವಿನ ವಿವೇಕ ಜ್ಞಾನದಿಂದ ನಿಗ್ರಹಿಸಿ ತನ್ಮೂಲಕ ಮನಸ್ಸನ್ನು ನಿಗ್ರಹಿಸುವನೋ ಶೀತೋಷ್ಣ ಸುಖ ದುಃಖ ಮಾನಾವಮಾನಗಳಲ್ಲಿ ಸಮಾಹಿತ ಚಿತ್ತನಾದರೆ ಅಂತಹ ಮನುಷ್ಯನು ಯೋಗಾರಂಭದಶೆಗೆ - ಅರ್ಹನಾಗುತ್ತಾನ ಪಾತಂಜಲಿ ಯೋಗ ಸೂತ್ರದಲ್ಲಿ ಮಹರ್ಷಿಗಳ ಸೂತ್ರ ಹೀಗಿದೆ

ಸುಖಾನುಶಯಿ ರಾಗಃ
ದುಃಖಾನು ಶಯಿ ದ್ವೇಷಃ

ಸುಖವನ್ನು ಕುರಿತು ಯೋಚಿಸುವಾಗ ಅಲ್ಲಿ ರಾಗವು ಪ್ರೀತಿ ಉಂಟಾಗುತ್ತೆ ದುಃಖವನ್ನು ಆಲೋಚಿಸುವಾಗ ದುಃಖವುಂಟಾಗುತ್ತೆ ಸೂಕ್ಷ್ಮವಾದ ಇವುಗಳನ್ನು ವಿರೋಧಿ ವೃತ್ತಿಗಳಿಂದ ತಿರಸ್ಕರಿಸಬೇಕೆಂದು ಪಾಂತಜಲಿ ಮಹರ್ಷಿ ಅವು ಕ್ಲೇಶಮೂಲವೆಂದು ತಿಳಿಸುತ್ತಾರೆ ಸುಖ ದುಃಖಗಳು ಕರ್ಮ ಫಲದಿಂದ ಬಂದವು ಎಂಬುವುದು ಋಷಿ ಸಿದ್ದಾಂತ ಸಾಧಕನು ಉಕ್ತಪ್ರಕಾರ ಕರ್ಮಯೋಗ ನಿಷ್ಠನಾಗಿ ಸತತವಾಗಿ ನಿಶ್ಯಬ್ದವಾಗಿರುವ ಸ್ಥಳದಲ್ಲಿ ನಿಗ್ರಹಿಸಲ್ಪಟ್ಟ ಬುದ್ಧಿ ಮನಸ್ಸುಳ್ಳವನಾಗಿ ಯಾವುದರಲ್ಲೂ ಆಸೆಯಿಲ್ಲದವನಾಗಿ 'ಆತ್ಮಾನಂ ಯುಂಜೀತ ಯತ ಚಿತ್ತಾತ್ಮಾ' -- ಎಂದರೆ ದ್ಯಾನ ರೂಪ ವೃತ್ತಿಯಿಂದ ನಿಗ್ರಹಿಸಿದ ಮನಸ್ಸುಳ್ಳವನಾಗಿ ಆತ್ಮ ದ್ಯಾನ ನಿರತನಾಗಬೇಕು



ಮನಸ್ಸಯಮ್ಯ ಮಚ್ಚಿತ್ತೋ
ಯುಕ್ತ ಆಸೀತ ಮತ್ಪರಃ"

ಶುಚಿಯಾದ ಸ್ಥಳದಲ್ಲಿ ದರ್ಬಾಸನದ ಮೇಲೆ ವಸ್ತ್ರವನ್ನು ಹಾಸಿ ಮನಸ್ಸನ್ನು ಏಕಾಗ್ರವಾಗಿ ನಿಲ್ಲಿಸಿ ದೇಹ ಕುತ್ತಿಗೆ ತಲೆಯನ್ನು ನೆಟ್ಟಗೆ ಇಟ್ಟುಕೊಂಡು ದಿಕ್ಕುಗಳ ಕಡೆನೋಡದೆ ಭ್ರೂಮಧ್ಯದಲ್ಲಿರುವ ತನ್ನ ಮೂಗಿನ ಮೇಲು ಬಾಗದಲ್ಲಿ ದೃಷ್ಟಿಯನ್ನಿಟ್ಟು ಪರ ಮಾತ್ಮನನ್ನು ಧ್ಯಾನಿಸಿ ಯೋಗಾಭ್ಯಾಸವನ್ನು ಉಪ ಕ್ರಮಿಸತಕ್ಕದ್ದು ಹೀಗೆ ಪರಮಾತ್ಮನನ್ನು ದ್ಯಾನಿಸಿ ದರೆ ಸಿದ್ಧಿಯು ಅವಶ್ಯಕವಾಗಿ ಲಬಿಸುತ್ತದೆ ಏಕಾ ಗ್ರತೆಗೆ ಕೂಡಬೇಕಾದರೆ ಇರಬೇಕಾದ ನಿಯಮ ಮನಸ್ಸಂಯಮದ ಪ್ರಾಮುಖ್ಯತೆ ಸ್ವಾಮಿ ವಿವರಿಸು ತ್ತಾನೆ.ಮುಂದೆ ಸ್ವಾಮಿ ಗೀತೆಯಲ್ಲಿ ಆತ್ಮ ಸಾಕ್ಷಾತ್ಕಾ ರಕ್ಕೆ ಸಾದನ ಸಪ್ತಕಗಳೂ, ಯಮ ನಿಯಮಾದಿ ಅಂಗಗಳೂ ಮುಖ್ಯ ಮಿತವಾದ ಸಾತ್ವಿಕಾಹಾರ ಸೇವನೆ ಅತಿನಿದ್ರೆ ಸದಾ ಜಾಗ್ರತನಾಗಿರುವವ ನಿಗೆ ಕೂಡದು ಅತಿ ಸರ್ವತ್ರತ್ಯಾಜ್ಯ ಅಹಾರಶುದ್ಧಿಂ ಸತ್ವ ಶುದ್ಧಿಃ ಎಂಬುವುದು ನಿಜ ನಿರ್ಮಲತ್ವವಿದ್ದರೆ ನಿಶ್ಚಲತ್ವ -- ಇದು ಪರಮ ತತ್ವ, ಐಹಿಕ ವಿಷ ಯಾನುರಾಗದಿಂದ ದೂರವಾಗಿ ಆತ್ಮ ಚಿಂತನದಲ್ಲಿ ನಿರತನಾಗಬೇಕು "ಯೋಗಿನೋ ಯತ ಚಿತ್ತಸ ಯುಂಜತೋ ಯೋಗಮಾತ್ಮನಃ" ಇಂದ್ರಿಯ ನಿಗ್ರ ಹವನ್ನು ಮಾಡುವನು ನಿಯಮ ಚಿತ್ತ ವೃತ್ತಿಯು ಳ್ಳವನಾಗಿ ಆತ್ಮ ದ್ಯಾನವನ್ನು ಮಾಡಬೇಕು ಇಲ್ಲಿ ದೃಷ್ಟಾಂತವು ಗಾಳಿ ಬೀಸದಿರುವ ಸ್ಥಳದಲ್ಲಿ ನಿಶ್ಚಲ ವಾಗಿ ಇರುವ ದೀಪದಂತೆ

ಈ ದ್ಯಾನಯೋಗದಲ್ಲಿ ಗ್ರಹಿಸಬೇಕಾದ ಮುಖ್ಯ ಸ್ವಾರಸ್ಯವೆಂದರೆ ಕರ್ಮಯೋಗಿಗೆ ಆತ್ಮ ಚಿಂತನ ರೂಪಯೋಗವು ಮುಖ್ಯ ಜ್ಞಾನಯೋಗಿಗೆ ತನ್ನ ಆತ್ಮೋಪಾಸನೆರೂಪಯೋಗ ಅವಶ್ಯಕ ಭಕ್ತಿ ಯೋಗಿಗೆ ಪರಮಾತ್ಮನ ಉಪಾಸನೆ ಅವಶ್ಯಕವು ಹೀಗೆ ಈ ಮೂರು ವಿಭಾಗಗಳಲ್ಲೂ ಚಿಂತನ ರೂಪ ವಾದ ದ್ಯಾನದ ಅವಶ್ಯಕತೆ ಇರುವುದರಿಂದ ತೈಲಧಾ ರೆಯಂತೆ ಪರಮಾತ್ಮನಲ್ಲಿ ಇಡುವ ಮನಸ್ಸು ಇರ ಬೇಕು ಚಿತ್ತವು ಬಾಹ್ಯ ರುಚಿಗಳಿಂದ ನಿರುದ್ಧವಾಗಿರ ಬೇಕು ಅದನ್ನೇ ಸ್ವಾಮಿ ೨೪, ೨೫ ನೆಯ ಶ್ಲೋಕಗ ಳಲ್ಲಿ ಹೇಳುವಾಗ

"ಸಂಕಲ್ಪ ಪ್ರಭವಾನ್ ಕಾಮಾನ್
ತ್ಯಕ್ತ್ವಾ ಸರ್ವಾನಶೇಷತಃ
ಮನಸೈವೇಂದ್ರಿಯಗ್ರಾಮಂ
ವಿನಿಯಮ್ಯ ಸಮಂತತಃ
ಶನೈಃ ಶನೈಃ ಉಪರಮೇತ್

ಬುದ್ಧ್ಯಾ ದೃತಿಗೃಹೀತಯಾ
ಆತ್ಮಸಂಸ್ಥಂ ಮನಃ ಕೃತ್ವಾ
ನ ಕಿಂಚಿದಪಿ ಚಿಂತಯೇತ್"

ಇಂದ್ರಿಯಗಳು ಕಾಮಗಳಲ್ಲಿ ಪ್ರವರ್ತಿಸ ಬಹುದು ಆದ್ದರಿಂದ ಆತ್ಮನ ವಿವೇಕ ಜ್ಞಾನದಿಂದ ಮನಸ್ಸನ್ನು ತಡೆದು ಇಂದ್ರಿಯಗಳು ವಿಷಯಗಳಲ್ಲಿ ಪ್ರವರ್ತಿಸದಂತೆ ಮನಸ್ಸನ್ನು ಅಭ್ಯಾಸದಿಂದ ಆತ್ಮ ಚಿಂತನದಲ್ಲೇ ಇರುವಹಾಗೆ ಸಮಾದಿ ಸ್ಥಿತನಾಗ ಬೇಕು ಈ ಅದ್ಯಾಯಗಳಲ್ಲಿ ಯಮ ನಿಯಮ ಪ್ರಾಣಾಯಾಮ ಪ್ರತ್ಯಾಹಾರ ದಾರಣ, ಆಸನ ದ್ಯಾನ ನಿದಿದ್ಯಾಸನಗಳನ್ನು ಶ್ರೀಕೃಷ್ಣನು ಅರ್ಜುನ ನಿಗೆ ಉಪದೇಶಮಾಡಿದ್ದಾನೆ ಪಾತಂಜಲ ಯೋಗ ಸೂತ್ರದಲ್ಲೂ ಕೂಡ ಯಮನಿಯಮಾಸನ ಪ್ರಾಣಾ ಯಾಮ ಪ್ರತ್ಯಾಹಾರ ದಾರಣಾ ದ್ಯಾನ ಸಮಾಧಿ ಯೋಗದ ಅಷ್ಟಾಂಗಗಳು ಎಂಬುವುದಾಗಿಯೂ, ಯಮವು ಅಹಿಂಸ, ಸತ್ಯ, ಆಸ್ತೇಯ, ಬ್ರಹ್ಮ ಚರ್ಯ, ಅಪರಿಗ್ರಹಗಳೆಂಬುವುದಾಗಿಯೂ ಶೌಚ, ಸಂತೋಷ, ತಪ ಸ್ವಾದ್ಯಾಯ, ಈಶ್ವರೋಪಾಸನೆ ಇವುಗಳು ನಿಯಮಗಳೆಂದೂ, ಯೋಗಕ್ಕೆ ಭಂಗ ವನ್ನು ತರುವ ಆಲೋಚನೆಗಳನ್ನು ತಡೆಯುವುದ ಕ್ಕಾಗಿ ಅದಕ್ಕೆ ವಿರೋದವಾಗಿರುವ ಬಾವನೆಗ ಳನ್ನು ಆಲೋಚಿಸಬೇಕೆಂದು ಪಾತಂಜಲ ಮಹರ್ಷಿ ಉಪದೇಶಿಸುತ್ತಾರೆ ಈ ಮೇಲಿನ ತತ್ವಗಳನ್ನೇ ಆದಾರಮಾಡಿಕೊಂಡು ಗೀತೆಯಲ್ಲಿ ಶ್ರೀಕೃಷ್ಣನು

ಯ ತೋ ಯ ತೋ ನಿಶ್ಚರತಿ
ಮನಶ್ಚಂಚಲಮಸ್ಥಿರಮ್
ತತಸ್ತತೋ ನಿಯಮ್ಯೈತತ್
ಆತ್ಮನ್ಯೇವ ವಶಂ ನಯೇತ್

ಶ್ರೀ ರಾಮಾನುಜಾಚಾರ್ಯರು ತಮ್ಮ ಗೀತಾ ಬಾಷ್ಯದಲ್ಲಿ ಈ ಶ್ಲೋಕಕ್ಕೆ ವ್ಯಾಖ್ಯಾನ ಮಾಡುವಾಗ "ಚಲಸ್ವಬಾವತಯಾ ಆತ್ಮನ್ಯಸ್ಥಿರಂ ಮನಃ ಯತೋ ಯತೋ ವಿಷಯಪ್ರಾವಣ್ಯಹೇತೋ ರ್ಬಹಿರ್ನಿಶ್ಚರತಿ ತತಸ್ತತೋ ಯತ್ನೇನ ಮನೋ ನಿಯಮ್ಯ ಆತ್ಮನ್ಯೇವ ಅತಿಶಯಿತ ಸುಖಭಾವಯಾ ವಶಂ ನಯೇತ್"

## ಶಿಲಾವಿಗ್ರಹ ನೀಡಿಕೆ ಯೋಜನೆಗಳು

ವಿವಿಧ ಹಿಂದೂ ದೇವಾಲಯಗಳಲ್ಲಿ ಪ್ರತಿಷ್ಠಾಪನೆಗಾಗಿ ತಿ ತಿ ದೇವಸ್ಥಾನಗಳು ಶಿಲಾವಿಗ್ರಹ ನೀಡುವಿಕೆಯ ಎರಡು ಯೋಜನೆಗಳನ್ನು ಅಂಗೀಕರಿಸಿವೆ

ಶಿಲಾವಿಗ್ರಹ ದಾನ ಯೋಜನೆಯಲ್ಲಿ ವಿವಿಧ ದೇವಾಲಯಗಳಿಗೆ ಪ್ರತಿಷ್ಠಾಪನೆಗಾಗಿ ಶ್ರೀ ವೆಂಕ ಟೇಶ್ವರಸ್ವಾಮಿ ಹಾಗೂ ಶ್ರೀ ಪದ್ಮಾವತೀದೇವಿಯವರ ವಿಗ್ರಹಗಳನ್ನು ನೀಡಲಾಗುವುದು ಇದಕ್ಕಾಗಿ ಅರ್ಜಿಗಳನ್ನು ತಿ ತಿ ದೇ ಕಾರ್ಯನಿರ್ವಹಣಾಧಿಕಾರಿಗಳಿಗೆ ಕಳುಹಿಸಬೇಕು ಜೊತೆಗೇ ದೇವಾಲ ಯದ ನಕ್ಷೆ, ಅಸಿಸ್ಟೆಂಟ್ ಕಮಿಷನರ್‌ಗಿಂತ ಕಡಮೆಯವರಲ್ಲದ ಸ್ಥಳೀಯ ದೇವಾದಾಯ ಇಲಾಖಾ ಧಿಕಾರಿಗಳಿಂದ ಪ್ರಮಾಣಪತ್ರವನ್ನು ಕಳುಹಿಸಬೇಕು

ಹಿಂದೂ ದೇವಾಲಯಗಳಿಗಾಗಿ ಇತರ ಎಲ್ಲ ದೇವ ದೇವತೆಯರ ಶಿಲಾ, ಪಂಚಲೋಹ, ವಿಗ್ರಹಗಳನ್ನೂ 50 ಶತಾಂಶ ರಿಯಾಯಿತಿ ದರಗಳಲ್ಲಿ ಒದಗಿಸಲಾಗುವುದು ಇದಕ್ಕಾಗಿಯೂ ಅರ್ಜಿಗಳನ್ನು ತಿ ತಿ ದೇ ಕಾರ್ಯನಿರ್ವಹಣಾಧಿಕಾರಿಯವರಿಗೆ ಕಳುಹಿಸಬೇಕು ಜೊತೆಗೇ ದೇವಾ ಲಯದ ನಕ್ಷೆ, ಅಸಿಸ್ಟೆಂಟ್ ಕಮಿಷನರ್ ಅವರ ಸ್ಥಾಯಿಯ ಸ್ಥಳೀಯ ಮುಜರಾಯಿ ಅಧಿಕಾರಿಯ ಪ್ರಮಾಣಪತ್ರವನ್ನು ಕಳುಹಿಸಬೇಕು ಹಣದ ಸಂದಾಯವಾದ ನಂತರವೇ ವಿಗ್ರಹಗಳ ತಯಾರಿಕೆಯ ಕೆಲಸವನ್ನು ಕೈಗೆತ್ತಿಕೊಳ್ಳಲಾಗುವುದು

ತಿರುಪತಿಯಿಂದ ವಿಗ್ರಹಗಳನ್ನು ಪಡೆದು ತಮ್ಮ ಸ್ಥಳಗಳಿಗೆ ಸಾಗಿಸುವ ಹೊಣೆ ಆಯಾ ಅಭ್ಯ ರ್ಥಿಗಳಿಗೇ ಸೇರಿದ್ದು

ಕಾಲದಿಂದ ಕಾಲಕ್ಕೆ ತಿ ತಿ ದೇ ಆಡಳಿತ ನಿರ್ವಾಹಕಮಂಡಳಿಯು ವಿಧಿಸುವ ಶರತ್ತುಗಳಿಗೆ ಅನುಗುಣವಾಗಿ ವಿಗ್ರಹಗಳನ್ನು ಸರಬರಾಜು ಮಾಡಲಾಗುವುದು

***ಈ ವಿಷಯದಲ್ಲಿನ ಎಲ್ಲ ವ್ಯವಹಾರಗಳಿಗೂ ಬರೆಯಬೇಕಾದ ವಿಳಾಸ--***
***ಕಾರ್ಯನಿರ್ವಹಣಾಧಿಕಾರಿ, ತಿ. ತಿ. ದೇ., ತಿರುಪತಿ--517 501.***

--ಮನಸ್ಸು ಚಂಚಲವು ಬಾಹ್ಯ ವಿಷಯಗಳ ಕಡೆ ಹೋಗದಂತೆ ಅದನ್ನು ಕಷ್ಟದಿಂದ ನಿಗ್ರಹಿಸಿ ಅಂತ ರಂಗದಲ್ಲಿರುವ ಜೀವಾತ್ಮ ಸ್ವರೂಪದ ಚಿಂತನದ ಕಡೆ ತಿರುಗಿಸಿ ಇಂದ್ರಿಯಗಳೆಂಬ ಕುದುರೆಯನ್ನು ಮನಸ್ಸೆಂಬ ಲಗಾಮಿನಿಂದ ಬಿಗಿದು ಹಿಡಿಯಬೇಕು

ಧ್ಯಾನಯೋಗದ ವಿಷಯವನ್ನು ಪ್ರಸ್ತಾಪಿಸು ವಾಗ ಆತ್ಮ ಪರಮಾತ್ಮ ಯದಾರ್ಥ ಚಿಂತನೆ ಯನ್ನು ಮನಸ್ಸಿನಲ್ಲಿ ನಿಲ್ಲಿಸುವಿಕೆಯೇ ಧ್ಯಾನಯೋ ಗದ ಸ್ವರೂಪವೆಂದು ತಿಳಿಯಬೇಕು ಗ್ರಂಥ ಪಠನದಿಂದ ಕಾಲಕ್ಷೇಪಗಳಿಂದ ಲಭಿಸುವ ಆತ್ಮಸ್ವ ರೂಪ ಪರಮಾತ್ಮಸ್ವರೂಪಜ್ಞಾನ ಸಂಪೂರ್ಣವಾ ದುದಲ್ಲ ಬುದ್ಧಿಯ ಮೂಲಕಗ್ರಹಿಸಿದ ಜ್ಞಾನವನ್ನು ಅನುಭವಕ್ಕೆ ತಂದುಕೊಳ್ಳಲು ಅದನ್ನು ಮನನ, ಚಿಂತನ ಮಾಡುತ್ತಾ ಅಭ್ಯಾಸಮಾಡಿದರೆ ಅದೇ ಧ್ಯಾನ ಯೋಗವು. ಸಂಕಲ್ಪದಿಂದ ಉದಯವಾ ಗುವ ಎಲ್ಲಾ ಕಾಮಗಳನ್ನು ಸಂಪೂರ್ಣವಾಗಿ ತ್ಯಜಿಸಿ ಮನಸ್ಸಿನಿಂದಲೇ ಇಂದ್ರಿಯಗಳ ಸಮೂಹವನ್ನು ನಿಗ್ರಹಿಸಿ ತಿಳಿವಳಿಕೆ ಬುದ್ಧಿಯಿಂದ ಧೈರ್ಯದಿಂದ ಮನಸ್ಸನ್ನು ಪರಮಾತ್ಮನಲ್ಲಿ ನೆಲೆಸುವಂತೆ ಮಾಡು ವುದೇ ಧ್ಯಾನಯೋಗದ ಗುರಿ ಪ್ರಶಾಂತ ಚಿತ್ತನೂ ರಜೋಗುಣವಿಲ್ಲದವನೂ ಕಶ್ಮಲರಹಿತನೂ ಆದ ಸಾದಕನಿಗೆ ಧ್ಯಾನದಿಂದ ನಿರತಿಶಯಾನಂದರೂಪ ವಾದ ಆತ್ಮಸಾಕ್ಷಾತ್ಕಾರವು ಲಭಿಸುತ್ತದೆ ಇಂತಹ ಯೋಗ ಸಿದ್ಧಿಯನ್ನು ಪಡೆದ ಚೇತನನು ತನ್ನ ಮತ್ತು ಇತರರ ಆತ್ಮರುಗಳಿಗೆ ನಾಲ್ಕು ವಿಧಸಾಮ್ಯ ಉಂಟೆಂದು ತಿಳಿಯುವನು

ಪ್ರದಮಾವಸ್ಥೆಯ ಸಾಮ್ಯದಿಂದ--

ಸರ್ವಭೂತಸ್ಥಮಾತ್ಮಾನಂ<br>
ಸರ್ವ ಭೂತಾನಿ ಚಾತ್ಮನಿ<br>
ಈಕ್ಷತೇ ಯೋಗ ಯುಕ್ತಾತ್ಮಾ<br>
ಸರ್ವತ್ರ ಸಮದರ್ಶಿನಃ

ಎಂಬುವುದರಲ್ಲಿ ತನ್ನ ಆತ್ಮ ಇದೆಯೆಂದೂ ತಿಳಿ ಯುವ ಸಾಮ್ಯಭಾವಯೋಗಿ ಆತ್ಮನನ್ನು ಸರ್ವ ಭೂತಗಳಲ್ಲಿ ನೋಡುವ ಅಭ್ಯಾಸವನ್ನು ಕೈಗೊಳ್ಳು ತ್ತಾನೆ ಪ್ರತಿಯೊಂದೂ ಪರಮಾತ್ಮನ ಅಂಶವೆಂದು ಅವನ ಮತ ಕಾರಣ ಪರಮಾತ್ಮನೂ ಸಹ ಜೀವಾ ತ್ಮರ ಹಾಗೆ ಜ್ಞಾನಸ್ವರೂಪನಾಗಿ ಇರುವುದರಿಂದ ಎಲ್ಲಾ ಜೀವಾತ್ಮರೂ ಪರಮಾತ್ಮನಿಗೆ ಸಮರಾದುದ ರಿಂದ ಪರಸ್ಪರ ಸಮರೆಂಬ ಜ್ಞಾನ ದ್ವಿತೀಯಾವಸ್ಥೆ

ಯೋ ಮಾಂ ಪಶ್ಯತಿ ಸರ್ವತ್ರ<br>
ಸರ್ವಂ ಚ ಮಯಿ ಪಶ್ಯತಿ<br>
ತಸ್ಯಾಹಂ ನ ಪ್ರಣಶ್ಯಾಮಿ<br>
ಸ ಚ ಮೇ ನ ಪ್ರಣಶ್ಯತಿ

ಎಂಬುವುದರ ಅರ್ಥ ದ್ವಿತೀಯಾವಸ್ಥೆ,

ಮೂರನೆಯ ಅವಸ್ಥೆ ಎಲ್ಲಾ ಜೀವಾತ್ಮರೂ ಪರ ಮಾತ್ಮನಿಗೆ ಶರೀರವಾಗಿ ಅವನಲ್ಲಿ ಏಕತ್ವವನ್ನು ಹೊಂದಿರುವುದರಿಂದ ಪರಮಾತ್ಮನು ಆತ್ಮವಾಗಿರು ವುದರಿಂದ ಇಂತಹ ಶರೀರಾತ್ಮಭಾವವು ಜೀವಾತ್ಮರಿ ಗೆಲ್ಲಾ ಇರುವುದರಿಂದ ಎಲ್ಲಾ ಜೀವಾತ್ಮರು ಸಮವು.

ನಾಲ್ಕನೆಯ ಅವಸ್ಥೆ--

ಆತ್ಮೌಪಮ್ಯೇನ ಸರ್ವತ್ರ<br>
ಸಮಂ ಪಶ್ಯತಿ ಯೋಽರ್ಜುನ<br>
ಸುಖಂ ವಾ ಯದಿ ವಾ ದುಃಖಂ<br>
ಸ ಯೋಗೀ ಪರಮೋ ಮತಃ

ಯೋಗಿ ಎಲ್ಲರನ್ನೂ ತನ್ನಂತೆ ಭಾವಿಸುತ್ತಾನೆ ಸರ್ವರ ಸುಖ ದುಃಖ ತನ್ನ ಸುಖ ದುಃಖ ವೆಂದು ಭಾವಿಸುವನು ಸರ್ವಶ್ರೇಷ್ಠನಾದ ಯೋಗಿ ಇಂತಹ ನಾಲ್ಕು ಸಾಮ್ಯಬುದ್ಧಿ, ಮನೋನಿಗ್ರಹ, ಧ್ಯಾನ, ಮನನ ಚಿಂತನ ಕೀರ್ತನಗಳಿಂದ ಹೊಂದ ಬಹುದು ಮನಸ್ಸಿನ ನಿಗ್ರಹವು ಬಹು ಕಷ್ಟ. ಅದು ಮರ್ಕಟಕವಿದ್ದಂತೆ, ಲಂಗು ಲಗಾಮಿಲ್ಲದ ಕುದು ರೆಯಂತೆ ಹುಚ್ಚುಹೊಳೆಯಂತೆ, ಕಾಲಾಗ್ನಿ ಯಂತೆ, ವಾಯುವೇಗ ಮನೋವೇಗಗಳಲ್ಲಿ ಓಡು ವಂತಹವು. ಏಕಾಗ್ರತೆ, ಧ್ಯಾನ, ಅಭ್ಯಾಸ ಬಲದಿಂದ ಮಾತ್ರ ಸಾಧ್ಯ. ಹಾಗೇನಾದರೂ ಅಭ್ಯಾಸವೈರಾಗ್ಯಗ ಳಿಂದ ಮನಸ್ಸನ್ನು ನಿಗ್ರಹಿಸದೆ ಯೋಗಭ್ರಷ್ಟನಾದರೆ ಇಹಪರಗಳೆರಡರಲ್ಲೂ ದುರ್ಗತಿ ಹೊಂದುವುದಿಲ್ಲ ಕಾರಣ ಸುಕೃತ ಮಾಡಿದವನಿಗೆ, ಕರ್ಮ ಸಂಸ್ಕಾ ರದಿಂದ ಪುನಃ ಕರ್ಮಯೋಗವನ್ನು ಮಾಡಲು ಯೋಗ್ಯರಾದ ಶ್ರೇಷ್ಠ ಜನರಲ್ಲಿ ಜನ್ಮ ವನ್ನೆತ್ತುತ್ತಾನೆ ಯೋಗಿ ಯಾಗುತ್ತಾನೆ

"ಪ್ರಾಪ್ಯ ಪುಣ್ಯಕೃತಾಂ ಲೋಕಾನ್<br>
ಉಷಿತ್ವಾ ಶಾಶ್ವತೀಃ ಸಮಾಃ<br>
ಶುಚೀನಾಂ ಶ್ರೀಮತಾಂ ಗೇಹೇ<br>
ಯೋಗಭ್ರಷ್ಟೋಽಭಿಜಾಯತೇ

ಪೂರ್ವ ಸುಕೃತ ವಾಸನೆಯಿಂದ ಪುನಃ ಕರ್ಮ ಯೋಗವನ್ನು ಅವಲಂಬಿಸುತ್ತಾನೆ ಹಿಂದಿನ ಜನ್ಮ ದಲ್ಲಿ ಗಳಿಸಿದ ಜ್ಞಾನವನ್ನು ಪಡೆದು ಹಿಂದಿಗಿಂತ ಹೆಚ್ಚಿಗೆ ಪರಿಪೂರ್ಣತೆಯನ್ನು ಪಡೆಯಲು ಪ್ರಯ ತ್ನಿಸುತ್ತಾನೆ ಪ್ರಯತ್ನದಿಂದ ಅಭ್ಯಾಸ ಮಾಡುವ ವನು ಏನೊಂದು ವಿಘ್ನವಿಲ್ಲದೆ ಪರಮಗತಿಯನ್ನು ಹೊಂದುತಾನ

ಧ್ಯಾನಯೋಗದ ಕೊನೆಯ ಶ್ಲೋಕದಲ್ಲಿ ಶ್ರೀಕೃ ಷ್ಣನು ಅರ್ಜುನನ್ನು ಕುರಿತು

ಯೋಗಿನಾ ಮಪಿ ಸರ್ವೇಷಾಂ<br>
ಮದ್ಗ ತೇನಾಂತರಾತ್ಮನಾ<br>
ಶ್ರದ್ಧಾವಾನ್‌ಬಜತೇ ಯೋ ಮಾಂ<br>
ಸಮೇ ಯುಕ್ತತಮೋ ಮತಃ

ನನ್ನಲ್ಲಿ ಮನಸ್ಸುಳ್ಳವನಾಗಿ ನನ್ನನ್ನು ಹೊಂದಲು ಶ್ರದ್ಧಾಪೂರ್ವಕವಾಗಿ ಅಭಿಲಾಷೆವುಳ್ಳವನು ನನ್ನನ್ನು ಬಜಿಸುತ್ತಾನಯೋ ಅವನೇ ಯೋಗಿಗಳಲ್ಲಿ ಶ್ರೇಷ್ಠನು ಇಲ್ಲಿ ಕೇವಲ ಪ್ರತ್ಯಗಾತ್ಮ ಸ್ವರೂಪವನ್ನು ಮಾತ್ರ ಧ್ಯಾನಮಾಡುವವನು, ಧ್ಯಾನಯೋಗವು ಸಫಲವಾದಾಗ ಜೀವಾತ್ಮ ಸ್ವರೂಪವನ್ನು ಮಾತ್ರ ಸಾಕ್ಷಾತ್ಕಾರಮಾಡಿಕೊಳ್ಳುತ್ತಾನೆ ಆದರೆ ಪರಮಾ ತ್ಮನ ಸ್ವರೂಪವನ್ನು ಅರಿಯುವ ಉತ್ಕಟ ಅಪೇಕ್ಷೆ ಯುಳ್ಳವನೇ ಪರಮ ಶ್ರೇಷ್ಠನು ಆದ್ದರಿಂದ ಪರ ಮಾತ್ಮನಧ್ಯಾನವೇ ಸರಿಯಾದ ಧ್ಯಾನ ಪರಮಾತ್ಮನ ಚಿಂತನ ರೂಪ ಧ್ಯಾನ ಶ್ರೇಷ್ಠತಮವಾದದ್ದು ಭಕ್ತಿ ಯಿಂದ ಬಗವಂತನನ್ನು ಧ್ಯಾನಮಾಡುವುದೇ ಚೇತ ನನ ಗುರಿಯಾಗಬೇಕು ಪರಮಾತ್ಮನನ್ನೇ ಪರಮ ಉಪಾಸಕನು ಎಂಬುವುದಾಗಿ ನಂಬಿ ಪ್ರಾಪಂಚಿಕ ವಿಷಯ ಚಿಂತನಗಳಿಂದ ದೂರನಾಗಿ ಅವನ್ನು ಭಕ್ತಿ ಯಿಂದ ಉಪಾಸನೇ ಮಾಡುವುದೇ ಧ್ಯಾನಯೋಗ ದೈವಭಕ್ತಿಯೇ ಸರ್ವೋತ್ಕೃಷ್ಟವಾದದ್ದು ಬಗವಾನ್ ಶ್ರೀಕೃಷ್ಣನ ಈ ಗೀತಾ ಉಪದೇಶಾಮೃತವು ದುಃಖಿ ಯಾದ ಮನುಷ್ಯನಿಗೆ ದರ್ಮಾದರ್ಮಗಳ ಗೊಂದ ಲಕ್ಕೆ ಸಿಲುಕಿ ದಾರಿ ಕಾಣದೆ ಪಂಬಲಿಸುತ್ತಿರು ವಾಗ ಧ್ಯಾನ ಯೋಗ ಸಾದನೆಯಿಂದ ಶಾಂತಿಯನ್ನು ಹೊಂದಬಲ್ಲನು--

"ಸರ್ವ ಪಾಪೇಭ್ಯಃ<br>
ಮೋಕ್ಷಯಿಷ್ಯಾಮಿ ಮಾ ಶುಚಃ"

ಎಂಬುವ ಸ್ವಾಮಿಯ ಭರವಸೆ ರಕ್ಷಿಸಲು ಸ್ವಾಮಿ ಬದ್ಧ ಕಂಕಣ ನಾಗಿನಿಂತಿರಲು ಚೇತನನು ಭಗವಂ ತನನ್ನು ಧ್ಯಾನಮಾಡುವುದೇ ಅವನ ಆದ್ಯಕರ್ತವ್ಯ



# ತಿ. ತಿ. ದೇವಸ್ಥಾನಗಳು, ತಿರುಪತಿ
# ಪ್ರಕಟನ ಶಾಖೆ

## ಮಾರಾಟಕ್ಕೆ ಸಿದ್ಧವಾಗಿರುವ ಅಮೂಲ್ಯ ಧಾರ್ಮಿಕ ಗ್ರಂಥ ರಾಶಿ

### *ಕನ್ನಡ :*

ಶ್ರೀನಿವಾಸನ ಹಾಡುಗಳು--ಭಾಗ--೨ (ಶ್ರೀಪಾದರಾಜರು,
ವ್ಯಾಸರಾಯರು, ವಾದಿರಾಜರು, ಕನಕದಾಸರು) 4--30

ಸೃಷ್ಟಿಪ್ರಕರಣ (ದಾಸಸಾಹಿತ್ಯದಲ್ಲಿ ವಿವರಿಸಿದಂತೆ)
--ವಿ ಬಾದರಾಯಣ ಮೂರ್ತಿ 12--50

ಪುರಂದರೋಪನಿಷತ್ (ಪುರಂದರದಾಸರ ಏಳು ಕೃತಿ ವಿವರಣೆ)
--ಬನ್ನಂಜೆ ಗೋವಿಂದಾಚಾರ್ಯ 7--00

ಕೇಶವಾದಿ ರೂಪಗಳು (ಕನ್ನಡ, ತೆಲುಗು, ಆಂಗ್ಲ,
ಹಿಂದಿ, ಚಿತ್ರವಿವರಣೆ) --ಸಂ ಕೆ ಅಪ್ಪಣ್ಣಾಚಾರ್ಯ 3--75

ಕರ್ನಾಟಕ ಹರಿದಾಸರು (ಕನ್ನಡ, ತೆಲುಗು, ಆಂಗ್ಲ,
ಹಿಂದಿ, ಚಿತ್ರವಿವರಣೆ) --ಸಂ ಕೆ ಅಪ್ಪಣ್ಣಾಚಾರ್ಯ 2--25

ಸ್ತೋತ್ರ ಕುಸುಮಮಾಲಾ --ಸಂ ವೆಂಕಟಾಚಲ 3--00

ಆಚಾರಗಳು ಆಡಂಬರಗಳು --ಕೆ ಚಂದ್ರಮೌಳಿ 0--40

ಶ್ರೀ ವೆಂಕಟೇಶ್ವರ ಸುಪ್ರಬಾತ (ವಿವರಣೆ ತಾತ್ಪರ್ಯ) 0--50

" " (ಕನ್ನಡ ಲಿಪಿಯಲ್ಲಿ) 0--12

### *ಮಕ್ಕಳಿಗಾಗಿ :*

ಶ್ರೀಪಾದರಾಜರು --ಎಂ ಎಸ್ ಗುಂಡೂರಾವ್ 0--75

ಮಹಿಪತಿದಾಸರು --ಶಾನಭಾಗ 0--85

ಪ್ರಸನ್ನ ವೆಂಕಟದಾಸರು --ವಿ ಬಾದರಾಯಣಮೂರ್ತಿ 0--80

ಗೋಪಾಲದಾಸರು --ರುಕ್ಮಿಣಿಗಿರಿಮಾಜಿ 0--75

### *ಹಿಂದಿ :*

ಶ್ರೀ ವೆಂಕಟೇಶ್ವರ ಜೀ ಕೆ ಸುಪ್ರಭಾತ್ ಸ್ತೋತ್ರ
--ಡಾ ಎಂ ಸಂಗಮೇಶಂ 0--20

ಶ್ರೀ ವೇಂಕಟೇಶ್ವರ ಸುಪ್ರಬಾತ್ (ಸಚಿತ್ರ) 11--00

ತೀರ್ಥರಾಜ ತಿರುಪತಿ --ಡಾ ಎಂ ಸಂಗಮೇಶಂ 1--50

### *ಸಂಸ್ಕೃತ :*

ಶ್ರೀ ವೇಂಕಟೇಶ್ವರ ಸುಪ್ರಬಾತಂ 0--12

ಶ್ರೀ ವೇಂಕಟೇಶ್ವರ ಅಷ್ಟೋತ್ತರ ಸಹಸ್ರನಾಮ ಸ್ತೋತ್ರಾಣಿ 0--62

ಕಠೋಪನಿಷತ್ --ಡಾ ಕೆ ಸಿ ವರದಾಚಾರಿ ಹಾಗೂ
--ಡಾ ಡಿ ತಾತಾಚಾರ್ಯ 15--00

ಮಾರ್ಕಂಡೇಯ ಸಂಹಿತಾ 18--00

ತತ್ತ್ವಸಂಖ್ಯಾನಂ -- ಆರ್ ರಾಮಮೂರ್ತಿ ಶರ್ಮಾ 2--00

ಬ್ರಹ್ಮಸೂತ್ರ ಬಾಷ್ಯ (ಬಾಗ--೧)
-- ಆರ್ ರಾಮಮೂರ್ತಿ ಶರ್ಮಾ 30--00

ಅಲಂಕಾರ ಸಂಗ್ರಹ -- ಸಂ--ಕೆ ಭಾಸ್ಕರರಾವ್ 16--00

ಸೀತಾರಾಮಾಂಜನೇಯಂ
--ಡಾ ಡಿ ಅರ್ಕಸೋಮಯಾಜಿ 50--00

ಪ್ರಶ್ನೋಪನಿಷತ್ 11--00

ಶ್ರೀಮತ್ ವೈಖಾನಸೇ ಭಗವಚ್ಛಾಸ್ತ್ರೇ ಕ್ರಿಯಾಧಿಕಾರಃ
--ಸಂ--ಡಾ ಎಸ್ ಬಿ ರಘುನಾಥಾಚಾರ್ಯ 25--00

1000 ರೂಗಳನ್ನು ಮೀರಿದ ಪುಸ್ತಕಗಳ ಕೊಳ್ಳುವಿಕೆಗೆ 30 ಶತಾಂಶ ರಿಯಾಯಿತಿಯೂ, 500 ರೂಗಳಿಂದ 1000ರೂ ವರೆಗೆ 25 ಶತಾಂಶ ರಿಯಾಯಿತಿಯೂ, 100 ರೂ.ಗಳಿಂದ 500 ರೂ.ವರೆಗೆ 15 ಶತಾಂಶ ರಿಯಾಯಿತಿಯೂ ಉಂಟು

ಅಂಚೆವೆಚ್ಚ ಪ್ರತ್ಯೇಕ

ಕೂಡಲೇ ಬರೆಯಿರಿ

***ಸೇಲ್ಸ್‌ವಿಂಗ್ ಆಫ್ ಪಬ್ಲಿಕೇಷನ್ಸ್,***
***ತಿ. ತಿ. ದೇ. ತಿರುಪತಿ.***

# ನಾನು ಮತ್ತು ಪಾರ್ಶ್ವವಾಯು

--ವಿದ್ವಾನ್. ಬ ನ. ಗುಂಡೂರಾವ್.

ವನ್ದೇವಂ ಅಚ್ಯುತಾರ್ಯಮ್ -- ಅಚ್ಯುತಾರ್ಯರಿಗೆ ನನ್ನ ಭಕ್ತಿ ಪೂರ್ವಕ ನಮನಗಳು ಅವರು ನನ್ನ ಗುರುಗಳು ನನ್ನ ಬಾಳನ್ನು ತಿದ್ದಿ ನಿಲ್ಲಿಸಿದ ಕುಶಲ ಶಿಲ್ಪಿ ಅವರು ಮಹಾನ್ ವೈಯಾಕರಣಿಗಳು, ನನ್ನನ್ನು ವ್ಯಾಕರಣಶಾಸ್ತ್ರ ನಿಷ್ಣಾತನಾಗಿ ಮಾಡಿದ ಕೃಪಾಮೂರ್ತಿ

ನನ್ನ ತಂದೆಯವರು ಶ್ರೀ ಮಾದ್ರಿದತ್ತ ಕುಮಾರಿಲಭಟ್ಟರ ಬಟ್ಟ ಮಿಮಾಂಸಾ ಸಂಪ್ರದಾಯದಲ್ಲಿ ಅತ್ಯಂತ ಶ್ರದ್ಧೆ ಇದ್ದ ಅದ್ವಿತೀಯ ಪಂಡಿತ ಪ್ರಕಾಂಡರು ವೇದಾಂತ ಶಾಸ್ತ್ರಾಭ್ಯಾಸ ದೀಕ್ಷೆ ಇತ್ತು ಆ ಬಗ್ಗೆ ನನಗೆ ಸಂಬಂದಪಟ್ಟ ಅನೇಕ ಶಾಸ್ತ್ರಗ್ರಂದಗಳನ್ನು ತಂದೆಯವರೇ ಪ್ರಾರಂಬದಲ್ಲಿ ಪಾಠ ಹೇಳಿದರು ನಾನು ವೇದಾಧ್ಯಯನ ಮಾಡಿದ್ದು ಶ್ರೀ ಮಾಧವಾಚಾರ್ಯರಲ್ಲಿ ತರ್ಕಶಾಸ್ತ್ರ ಕಲಿತದ್ದು ಶ್ರೀ ದಾಮೋದರಾರ್ಯರ ಪಾದಪೀಠದ ಬಳಿ ಕುಳಿತು ಹೀಗೆ ಅನೇಕ ಪುಣ್ಯ ಜೀವಿಗಳ ಪಾವನ ಸಂಸರ್ಗ ನನಗೆ ಭಗವಂತನೇ ಅನುಗ್ರಹಿಸಿದ ಯೋಗವೆಂದೇ ನಾನು ಬಾವಿಸಿದ್ದೇನೆ

ನಾನು ಸಾಹಿತ್ಯ ಪ್ರಪಂಚಕ್ಕೆ ನನ್ನದೇ ಆದ ಅಲ್ಪ ಕಾಣಿಕೆ ಸಲ್ಲಿಸಿ ಕೃತಾರ್ಥನಾಗಿದ್ದೇನೆ ಭಗವತೀ ವಾಗ್ದೇವಿಯಾರಾದನೆ ಮಾಡಿದ ದನ್ಯಜೀವಿಗಳ ಪಾವನ ಪರಂಪರೆಯಲ್ಲಿ ನನ್ನ ಹೆಸರೂ ಸೇರಿಕೊಂಡಿರುವುದು ನನ್ನ ಪಾಂಡಿತ್ಯದಿಂದಲ್ಲ -- ಯೋಗ್ಯತೆಯಿಂದಲ್ಲ -- ವಾಗ್ದೇವಿ ಶಾರದೆಯ ಕರುಣೆಯಿಂದ ಹಾಗೂ ನನ್ನ ಗುರುವರ್ಯರ ಆಶೀರ್ವಾದ ಬಲದಿಂದ ಮಾತ್ರ -- ಎಂದು ನಾನು ಬಾವಿಸಿದ್ದೇನೆ ನನಗೆ ವ್ಯಾಕರಣ ಶಾಸ್ತ್ರದ ಬಗ್ಗೆ ವಿಶೇಷ ಒಲವು. ಒಂದು ರೀತಿಯ ತೆವಲು ಎಂದರೂ ಆದೀತು" ಯಾರು ಯಾವುದೇ ಶಾಸ್ತ್ರವನ್ನು ಅಭ್ಯಾಸಮಾಡಲಿ -- ಅದರ ಬಗ್ಗೆ ಅವರ ಶ್ರದ್ಧಾಭಕ್ತಿ ತೀವ್ರವಾದಂತೆಲ್ಲಾ ಆ ಶಾಸ್ತ್ರದ ಮೂಲಕವೇ ಅವರು ದೈವಸಾಕ್ಷಾತ್ಕಾರ ಪಡೆಯಲವಕಾಶವಿದೆ ಏಕೆಂದರೆ ಸಕಲ ಶಾಸ್ತ್ರಗಳ ಮೂಲ -- ಪರಾತ್ಪರವಸ್ತು -- ಭಗವಂತ ನಾನು ಪ್ರಕ್ರಿಯಾಸರ್ವಸ್ವ -- ಅಪನಿನೀಯ ಪ್ರಮಾಣ--ದಾತುಕಾವ್ಯ -- ಎಂಬ ಮೂರು ಗ್ರಂಥಗಳನ್ನು ವ್ಯಾಕರಣಕ್ಕೆ ಸಂಬಂದಿಸಿದಂತೆ ಬರೆದಿದ್ದೇನೆ ಪಾಣಿನಿ, ಕಾತ್ಯಾಯನ, ಪತಂಜಲಿ ಈ ಮೂರು ಜನ ದಿಗ್ದಂತಿಗಳು ವ್ಯಾಕರಣ ಕ್ಷೇತ್ರದ ಶಿಖರತ್ರಯಗಳು ನಿಜ ಆದರೆ ಭೋಜ, ಮುರಾರಿ, ಬವಬೂತಿ ಮುಂತಾದ ವಿದ್ವನ್ಮಣಿಗಳನ್ನು ಇಲ್ಲಿ ಹೆಸರಿಸಬೇಕಾದ್ದು ತಪ್ಪಲ್ಲವೆಂದು ನನ್ನ ವಿನಮ್ರ ವಿನಂತಿ ಮಾನಮೇಯೋದಯ -- ಎಂಬ ಹೆಸರಿನ ವೇದಾಂತ ಗ್ರಂದವನ್ನು ಬರೆದ ನಾನು ಕೆಲವು ಚಂಪು ಗ್ರಂದಗಳನ್ನು ಬರೆದದ್ದೂ ಉಂಟು ಇದರ ಜತಗ ಪ್ರಶಸ್ತಿ ಗ್ರಂದಗಳನ್ನು ರಚಿಸಿದ ನಾನು ಈ ಬಗ್ಗೆ ಸ್ವಲ್ಪ ವಿವರಣ ಕೊಡಬಯಸುತ್ತೇನೆ

ರಾಜಮಹಾರಾಜರು -- ಶ್ರೀಮಂತರು ಕವಿಗಳಿಗೂ ಕಲಾವಿದರಿಗೂ ಆಶ್ರಯಕೊಟ್ಟು ಅವರಿಂದ ಉತ್ತಮ ಕಾರ್ಯ ಮಾಡಿಸಿರುವ ಉದಾಹರಣಗಳು ನಮ್ಮ ದೇಶದಲ್ಲಿ ದೇಕಾದಷ್ಟಿವೆ ಆಶ್ರಯದಾತರನ್ನು ಪ್ರಶಂಸೆ ಮಾಡಿ ಬರದ ಗ್ರಂದಗಳನ್ನು ಪ್ರಶಸ್ತಿ -- ಎನ್ನುತ್ತೇನ ನಾನು ಕೊಚ್ಚಿಯ ವೀರಕೇರಳವರ್ಮ, ವಾಟಿಕುಂಪೂರ್‌ನ ಗೋದಾವರ್ಮ, ಅಂಬಲ ಪ್ರುಳದ ದೇವನಾರಾಯಣ, ಕೋಷಿಕೋಡ್‌ನ ಮಾನವಿಕ್ರಮ -- ಈ ಪುಣ್ಯಾತ್ಮರನ್ನು ನಾನು ಪ್ರಶಂಸ ಮಾಡಿದ್ದುಂಟು -- ಇದು ತಪ್ಪಲ್ಲ -- ಒಂದು ರೀತಿಯಲ್ಲಿ ನೋಡಿದರೆ ಕೃತಜ್ಞತಾ ಸಮರ್ಪಣೆ -- ಅಷ್ಟೆ. ಇದರ ಜತೆಗ ದೇವೀದೇವತೆಗಳ ಸ್ತೋತ್ರಗಳನ್ನೂ ನಾನು ರಚಿಸಿದ್ದೇನ -- ಗುರುವಾಯುಪುರ ಸ್ತೋತ್ರ, ಶ್ರೀಪಾದ ಸಪ್ತತಿ -- ಇತ್ಯಾದಿ

ನಾನು ಪಾರ್ಶ್ವವಾಯು ರೋಗಕ್ಕ ತುತ್ತಾಗಿ ಜೀವನದಲ್ಲಿ ಬಹಳ ಪರಿತಪಿಸಿದವನು ಇದು ನನ್ನ ಬಾಳಿನ ಇನ್ನೊಂದು ಮುಖ ಈ ಬಯಂಕರ ರೋಗ ತಾನಾಗಿ ಬಂದದ್ದಲ್ಲ -- ನಾನಾಗಿ ತಂದು



ಕೊಂಡದ್ದು ಇದು ನಿಮಗ ತುಂಬ ಆಶ್ಚರ್ಯವಾಗಿ ಕಾಣುತ್ತವಲ್ಲವೇ ? ಹಾಗ ನೋಡಿದರೆ ಬಾಳಿನ ಅನೇಕ ಸಮಸ್ಯೆಗಳು -- ಚಿಂತೆ -- ತಾಪತ್ರಯಗಳು --ನಾವಾಗಿ ತಂದುಕೊಂಡದ್ದೇ ಪ್ರಾರಬ್ಧ ಬೇರೆ -- ಸ್ವ ಇಚ್ಛಾ ಪ್ರಾರಬ್ಧ ಬೇರೆ" ಪಾರ್ಶ್ವವಾಯು -- ಅದನ್ನು ನೆನೆಸಿಕೊಂಡರೇನೇ ಬಯವಾಗುತ್ತದ ಈ ಜೀವಕ್ಕೆ ಏನೇನೋ ಹಿಂಸೆಗಳುಂಟು"

ನನ್ನ ಗುರುವರ್ಯರಾದ ಅಚ್ಯುತಾರ್ಯರು ಈ ಪಾರ್ಶ್ವವಾಯು ಬೇನೆಯಿಂದ ಬಳಲುತ್ತಿದ್ದರು ಆಗ ನಾನವರಿಗೆ ಬಹುವಾಗಿ ಸೇವ ಸಲ್ಲಿಸಿದೆ ಒಂದೊಂದು ಸಲ ಅವರ ಬಾದೆ ಕಂಡು ಕಣ್ಣಲ್ಲಿ ನೀರು ತುಂಬಿ ಬರುತ್ತಿತ್ತು ಈ ಬಾಧೆ ನನಗಾದರೂ ಬರಲಿ ಚಿಂತೆ ಇಲ್ಲ -- ನನ್ನ ಗುರುದೇವರಿಗೆ ಈ ಬೇನ ಪರಿಹಾರಮಾಡು -- ಎಂದು ಭಗವಂತನಲ್ಲಿ ಮೊರೆ ಇಟ್ಟೆ, ಆತ ನನ್ನ ಬೇಡಿಕೆಯನ್ನೀಡೇರಿಸಿದ ಅವರಿಗೆ ಕ್ರಮೇಣ ಕಾಯಿಲೆ ಗುಣವಾಯ್ತು ನಾನು ಹಾಸಿಗೆ ಹಿಡಿದೆ ಪ್ರಾರ್ದನೆ ಮನ್ನಿಸಿ ಕಾಯಿಲೆ ಕೊಟ್ಟ ಬಗವಂತ, ಅದೇ ಪ್ರಾರ್ಥನೆಯನ್ನು ಲಾಲಿಸಿ, ಕಾಯಿಲೆಯನ್ನು ಗುಣಪಡಿಸಲೂ ಬಹುದಲ್ಲವೇ -- ಎಂಬ ತರ್ಕ ನನ್ನ ತಲೆಗೆ ಹೊಳೆಯಿತು ಈ ವಿಚಾರವನ್ನು ಹಿರಿಯರಾದ ಎಹುತಚ್ಚನ್‌ರಲ್ಲಿ ಪ್ರಸ್ತಾಪಿಸಿದೆ ಅವರು ನಿನ್ನ ಅಬಿಪ್ರಾಯ ಸರಿ, ನಿನಗೆ ದೈವಾನುಗ್ರಹವಿದೆ ಭಗವದನುಗ್ರಹದಿಂದ ನಿನ್ನ ಕಾಯಿಲೆ ಗುಣವಾಗುತ್ತದೆ ಮೀನಿನಿಂದ ಪ್ರಾರಂಬಮಾಡು -- ಎಂದರು

ಮೀನಿನಿಂದ ಪ್ರಾರಂಭಮಾಡು -- ಈ ಮಾತಿಗೇನರ್ಥ? ನಾನು ಬಹುವಾಗಿ ಯೋಚನೆ ಮಾಡಿದೆ ಕೊನೆಗೊಂದುದಿನ ಹೊಳೆಯಿತು -- ಭಗವಂತನ ಲೀಲಾವತಾರಗಳನ್ನು ಕುರಿತು ಬರಿ ಮತ್ಸ್ಯಾವತಾರದಿಂದ ಪ್ರಾರಂಭವಾಗಲಿ -- ಎಂದು ಹಿರಿಯರ ಅಭಿಪ್ರಾಯ" ಯೋಗಿಗಳು ಮಾತಾಡುವುದೇ ಹಾಗೆ, ಅವರ ಮಾತೆಲ್ಲ ಒಗಟು -- ವಿಚಿತ್ರಾರ್ಥಗರ್ಬಿತ" ನಾನು ಮಿತ್ರರ ನೆರವಿನಿಂದ ಒಂದು ಪುಣ್ಯಕ್ಷೇತ್ರಕ್ಕೆ ಹೊರಟೆ ಅಲ್ಲಿ ದೇವರ ದರ್ಶನ ಮಾಡಬೇಕು ಆ ಕರುಣಾಮೂರ್ತಿಯ ಲೀಲಾವಿಬೂತಿಯನ್ನು ಹಾಡಿ ಕೊಂಡಾಡಬೇಕು -- ಕೃಪಾಭಿಕ್ಷೆ ಬೇಡಬೇಕು -- ಎಂದು ನಿರ್ಣಯ ಮಾಡಿಕೊಂಡೆ! ಸರ್ಪಯಾಗ ಮಾಡಿದ್ದರಿಂದ ಜನಮೇಜಯನಿಗ ಶ್ವೇತ ರೋಗ ಬಂದಾಗ ಯಾವ ಸ್ವಾಮಿ ಅದನ್ನು ಪರಿಹಾರಮಾಡಿದನೋ, ಬ್ರಹ್ಮದೇವನಿಂದ ಸುತಪನೆಂಬ ಮಹರ್ಷಿ, ಆತನಿಂದ ಕಶ್ಯಪ -- ಆತನಿಂದ ವಸುದೇವ -- ಆತನಿಂದ ಕೃಷ್ಣ ಹೀಗೆ ಪರಂಪರಾನುಗತವಾಗಿ ಪುಣ್ಯಪುರುಷರು ಯಾವ ದಿವ್ಯಮಂಗಳ ಮೂರ್ತಿಯನ್ನು ಪಡೆದು, ಆರಾದಿಸಿದರು-ಅದೇ ಮೂರ್ತಿಯನ್ನು ನಾನೂ ಆರಾದಿಸಬೇಕೆಂದು ಸಂಕಲ್ಪಿಸಿದೆ ಕೃಷ್ಣನಿರ್ಮಿಸಿದ ದ್ವಾರಕಾನಗರ ಸಮುದ್ರದಲ್ಲಿ ವಿಲೀನವಾಯ್ತಷ್ಟೆ, ಆಗ ದ್ವಾರಕಾದೀಶ ಕಷ್ಣ, ಉದ್ಧವನಿಗೊಂದು ಕಿವಿಮಾತು ಹೇಳಿದ -- ನಾನು ಆರಾಧಿಸುತ್ತಿದ್ದ ದಿವ್ಯಮಂಗಳ ವಿಗ್ರಹ ಸಾಗರದಲ್ಲಿ ತೇಲಿಕೊಂಡು ಬರುತ್ತದೆ -- ಈ ವಿಚಾರ ನೀನು ದೇವ ಗುರುಗಳಾದ ಬೃಹಸ್ಪತಿಗಳಿಗೆ ತಿಳಿಸು ಅವರು ಆ ವಿಗ್ರಹವನ್ನು ಪಡೆದು ಸೂಕ್ತಸ್ಥಳದಲ್ಲಿ ಪ್ರತಿಷ್ಠ ಮಾಡಲಿ ಅದು ಮುಂಬರುವ ಕಾಲದಲ್ಲಿ ಭೂವೈಕುಂಠವಾಗುತ್ತದೆ ಅಲ್ಲಿ ನೆಲೆಸಿರುವ ಸ್ವಾಮಿ ಭಕ್ತಾಭೀಷ್ಟಪ್ರದಾಯಕನಾಗಿರುತ್ತಾನೆ ಈ ವಿಚಾರವನ್ನೆಲ್ಲ ನಾನು ಹಿರಿಯರಿಂದ ಕೇಳಿದ್ದೆ ವೈಕುಂಠವೇ ಬೂಲೋಕಕ್ಕಿಳಿದು ಬಂದಿರುವಾಗ, ಇಲ್ಲಿ ಕರುಣಾಮೂರ್ತಿ - - ಕಲ್ಪವೃಕ್ಷವಂತೆ ನಿಂತಿರುವಾಗ, ನನ್ನ ಬಯನಿವಾರಣೆಗೆ ಶಂಕೆಯೇನುಂಟು? ಗುರು -- ವಾಯುದೇವ ಇಬ್ಬರೂ ಪ್ರತಿಷ್ಠಮಾಡಿದ್ದಾರೆ ಈ ದಿವ್ಯ ಮಂಗಳ ಮೂರ್ತಿಯನ್ನು -- ಇದೇ ಗುರುವಾಯೂರು ಕ್ಷೇತ್ರ

ನಾನು ಗುರುವಾಯೂರಿಗೆ ಬಂದೆ -- ಮಿತ್ರರು ನನ್ನನ್ನು ಕರೆತಂದರು ಎನ್ನುವುದು ಸೂಕ್ತ ನಾನು ಸ್ವತಂತ್ರವಾಗಿ ಓಡಾಡುವ ಸ್ಥಿತಿಯಲ್ಲಿರಲಿಲ್ಲ ನಾನು ಇಲ್ಲಿಗೆ ಬಂದದ್ದು ಸುಮಾರು ಕ್ರಿ ಶ 1587 ಎಂದು ನನಪು, ಸ್ವಾಮಿಯಸೇವೆ ಮಾಡುತ್ತ, ನೂರುದಿನದಲ್ಲಿ ಒಂದು ಸಾವಿರದ ಮುವತ್ತಾರು ಶ್ಲೋಕಗಳಲ್ಲಿ ಬಗವಂತನ ಲೀಲಾವಿಭೂತಿಗಳನ್ನು ಕೊಂಡಾಡಿದೆ ಪಾರ್ಶ್ವವಾಯುವಿನಿಂದಾಗಿ ನನಗೆ ಬರೆಯಲಾಗುತ್ತಿರಲಿಲ್ಲ ಶ್ಲೋಕಗಳನ್ನು ನಾನು ಹೇಳುತ್ತಿದ್ದಂತೆ ನನ್ನ ಮಿತ್ರರು ಯಾರೋ ಬರದುಕೊಂಡು ಪುಣ್ಯ ಬಾಜನರಾದರು ಆಪ್ತನಿಗೆ ನನ್ನ ನಮನ ಈ ಶ್ಲೋಕಗಳೆಲ್ಲ ಮುಗಿದದ್ದು -- ಅಂದರೆ ಗ್ರಂಥ ಸಂಪೂರ್ಣವಾದದ್ದು 27--11--1587 ರಂದು -- ಎಂದು ನನಗೆ ಸುಮಾರು ನೆನಪಿದೆ ಪ್ರಾರಂಭದಿಂದ ಪರಿಸಮಾಪ್ತಿಯವರೆಗೆ ಗ್ರಂದ ನಿರ್ವಿಘ್ನವಾಗಿ ಸ್ವಾಮಿದಯೆಯಿಂದ ಸರಸಸುಂದರ ಶೈಲಿಯಲ್ಲಿ ಕಮನೀಯವಾದ ಧಾಟಿಯಲ್ಲಿ ಸಾಗಿತು ಗ್ರಂಥ ಮುಕ್ತಾಯವಾಗುವ ವೇಳೆಗೆ ನನ್ನ ಕೈಕಾಲು ಸ್ವಾದೀನಕ್ಕೆ ಬಂತು ಪಾರ್ಶ್ವವಾಯು ಸಂಪೂರ್ಣಗುಣವಾಯ್ತು ಆನಂತರ -- ನನಗೇನೂ ಆಗೇ ಇರಲಿಲ್ಲವೇನೋ -- ಎಂಬಷ್ಟು ಆರೋಗ್ಯವಂತನಾದೆ ಒಂದು ನೂರಾ ಆರು ವರ್ಷಕಾಲ ಜೀವಿಸಿದ್ದೆ ಆ ಮಾತು ಹಾಗಿರಲಿ

ಒಬ್ಬ ಮನುಷ್ಯ ಎಷ್ಟುಕಾಲ ಜೀವಿಸಿದ್ದ ಎಂಬುದು ದೇರೆ ಹೇಗೆ ಬಾಳಿದ ಎಂಬುದು ದೇರ ವ್ಯಕ್ತಿಯ ಬಾಳು ನಶ್ವರ ಅವನು ಮಾಡಿದ ಕಾರ್ಯಗಳು ಶಾಶ್ವತ -- ಎಂದು ಹಿರಿಯರು ಹೇಳುತ್ತಾರೆ ಕವಿ ಶಾಶ್ವತನಲ್ಲ ಆದರೆ ಅವನ ಕಾವ್ಯ ಶಾಶ್ವತ ಕಾವ್ಯಂ ಕಲ್ಪಾಂತರ ಸ್ಥಾಯಿ ನಾನು ದೇವದೇವನ ಮುಂದ ಹಾಡಿದ್ದೇನು -- ಕೃತಿಯೋ -- ವಿಕೃತಿಯೋ? ನಾನು ವ್ಯಾಕರಣ ಓದಿದವನು ಧಾತು -- ಸಮಾಸ -- ಕಾಲ -- ವಿಭಕ್ತಿ ಇಷ್ಟೇ ನನ್ನ ಪ್ರಪಂಚ ಆದರೆ ಗುರುವಾಯೂರು ಪ್ರಭುವಿಗೆ ಬೇಕಾದದ್ದು ವಿಭಕ್ತಿ ಯಲ್ಲ -- ಬಕ್ತಿ ನನ್ನ ಗುರುಗಳು ಇಹಲೋಕ ವ್ಯಾಪಾರವನ್ನು ತ್ಯಜಿಸಿ ಹೋದ ದಿನ ನನಗೆ ಚೆನ್ನಾಗಿ ನೆನಪಿದೆ ಅಚ್ಯುತಾರ್ಯರು -- ಎಂದರೆ ನನಗೆ ಪರಮ ಭಕ್ತಿ ಅವರು ಮೃತರಾದದ್ದು ಸುಮಾರು ಕ್ರಿ ಶ 1624 ಎಂದು ನನ್ನ ನೆನಪು. ನನ್ನ ಗುರುಗಳು ಸರ್ವಜ್ಞರು ಜ್ಯೋತಿಷ, ವೈದ್ಯ ವ್ಯಾಕರಣ ಒಂದೇ ಎರಡೇ ಸಕಲ ಶಾಸ್ತ್ರ ಪ್ರವೀಣರು ನನ್ನನ್ನು ತುಂಬ ವಾತ್ಸಲ್ಯದಿಂದ ಕಾಪಾಡಿದ ಪುಣ್ಯಾತ್ಮ ಅವರಿಗವಸಾನಕಾಲ ಸಮೀಪಿಸಿತು ಈ ಪ್ರಯಾಣಕ್ಕೆ ಅವರು ಸಿದ್ಧವಾಗೇ ಇದ್ದರು ಕೃತಕೃತ್ಯಾಃ ಪ್ರತೀಕ್ಷನ್ತೇ ಮೃತ್ಯುಂ ಪ್ರಿಯಮಿವ ಅತಿದಿಮ್ -- ಎಂಬ ಮಾತು ನನ್ನ ಗುರುಗಳಿಗೆ ಅಕ್ಷರಶಃ ಅನ್ವಯವಾಗುತ್ತಿತ್ತು ನಾವೆಲ್ಲ ಸುತ್ತಲೂ ಕುಳಿತಿದ್ದೆವು. ಎಲ್ಲರ ಕಣ್ಣುಗಳಲ್ಲೂ ಕಂಬನಿ ತುಂಬಿತ್ತು ಅಚ್ಯುತಾರ್ಯರು ಮಲಗಿದ್ದಂತೆಯೇ ಎರಡೂ ಕೈಗಳನ್ನು ಜೋಡಿಸಿದರು -- ಕ್ಷೀಣಧ್ವನಿಯಲ್ಲಿ ಹೇಳಿದರು---

ಕಾಯೇ ಸೀದತಿ ಕಂಠರೋದಿನಿ
ಕಫೇ ಕುಂಠೇಚ ವಾಣೀಪದೇ
ಜಿಹ್ವಾಯಾಂ ದೃಶಿಜೀವತೇ ಜಗಿಮಿಕ್ಷಾ
ಶ್ವಾಸೇ ಶನೈಃ ಶಾಮ್ಯತಿ
ಆಗತ್ಯಸ್ವಯಮೇವನಃ ಕರುಣಯಾ
ಕಾತ್ಯಾಯನೀ ಕಾಮುಕಃ
ಕರ್ಣೇವರ್ಣಯತಾದ್ ಭವಾರ್ಣವ
ಭಯಾದುತ್ತಾರಕಂ

ಇನ್ನೊಂದೇ ಮಾತು ಜೋಡಿಸದೇಕಾಗಿತ್ತು -- ಈ ಶ್ಲೋಕ ಪೂರ್ಣವಾಗುತ್ತಿತ್ತು ಆದರೆ ಗುರುಗಳು ಅಷ್ಟರಲ್ಲಿ ಕಣ್‌ಮುಚ್ಚಿಬಿಟ್ಟರು ಒಂದು ಮಾತು ಜೋಡಿಸುವಷ್ಟು ಕಾಲಾವಕಾಶ ಕೊಡಲಿಲ್ಲ ಕಾಲಪುರುಷ" ಅವರ ಕೃಪೆಯಿಂದಲೇ ಅಂತ ಕಾಣುತ್ತದೆ -- ಅಲ್ಲಿ ಬೇಕಾಗಿದ್ದ ಒಂದು ಮಾತನ್ನು ನಾನು ಜೋಡಿಸಿದೆ ಅದೇನುಗೊತ್ತೇ ತಾರಕಮ್" ನನ್ನ ಗುರುಗಳು ಸಕಲ ಶಾಸ್ತ್ರಗಳಿಗೂ ಆಶ್ರಯಸ್ಥಾನವಾಗಿದ್ದರು ಅವರು ಹೊರಟು ಹೋದ ಮೇಲೆ ಆ ಶಾಸ್ತ್ರಗಳೆಲ್ಲ ಆಶ್ರಯ ಹೀನವಾಗಿ ಅನಾಥವಾಗಿ ಹೋದವೆಂದೇ ನನ್ನ ಅಭಿಪ್ರಾಯ ಇದನ್ನೇ ನಾನು ಚರಮ ಶ್ಲೋಕದ ರೂಪದಲ್ಲಿ ಬರೆದೆನೆಂದು ನನಪಿದೆ ನಾನು ಗುರುವಾಯೂರು ಪ್ರಭುವಿನ ಸನ್ನಿಧಾನದಲ್ಲಿ ಕಂಡ ದಿವ್ಯಾನುಭವಗಳಲ್ಲಿ ಒಂದನ್ನಾದರೂ ಹೇಳದೇ ಇದ್ದರೆ ಸಮಾಧಾನವಿಲ್ಲ ಸಹೃದಯರಿಗಲ್ಲದೆ ಇಂಥದು ಇನ್ನಾರಿಗೆ ಹೇಳುವುದು?

ಪ್ರಹ್ಲಾದನನ್ನು ಸಂರಕ್ಷಿಸುವ ಸಲುವಾಗಿ ಬಗವಂತ ಸಭಾಸ್ಥಾನದ ವಜ್ರಸ್ತಂಭದಿಂದ ಆವಿರ್ಭವಿಸಿದ್ದಾನೆ ಅದು ಲೋಕಭೀಕರ ರೌದ್ರತಮ ಸ್ವರೂಪ ನೃಸಿಂಹನ ಆರ್ಭಟಕ್ಕೆ ಬುವನ ಬ್ರಹ್ಮಾಂಡಗಳೇ ನಡುಗಿ ಹೋಗಿವೆ ತಂದೆಯನ್ನು ಕೊಂದುಮಗನನ್ನು ಸ್ವಾಮಿ ಸಂರಕ್ಷಿಸಿದ್ದಾನೆ ತಾನು ಸರ್ವತ್ರ ವ್ಯಾಪ್ತನೆಂಬ ವಿಷಯವನ್ನು ರುಜುವಾತು ಮಾಡಿದ್ದಾನೆ ನಂಬಿ ಕರೆದರೆ ಬಂದು ತೀರುತ್ತೇನೆಂದು ಸಾಬೀತು ಮಾಡಿದ್ದಾನೆ ಈ ಸನ್ನಿವೇಶವನ್ನನುಭವಿಸಿದ ನಾನು ಸ್ವಾಮಿಯನ್ನು ಕುರಿತು ಪ್ರಹ್ಲಾದಪ್ರಿಯ -- ಎಂದು ಗದ್ಗದ ಕಂಠದಲ್ಲಿ ಹಾಡಿದ ಆಗೇನಾಯ್ತು ಗೊತ್ತೇ? ಗರ್ಭಗುಡಿಯಲ್ಲಿ ದಿವ್ಯಾಲಂಕೃತನಾಗಿ ನಿಂತಿದ್ದ ದೇವಾದಿದೇವ ನಸುನಗುತ್ತ ಹೇಳುತ್ತಿದ್ದಾನೆ -- "ನಿನ್ನ ಮಾತನ್ನು ಸ್ವಲ್ಪ ಬದಲಾಯಿಸಿಕೊಂಡರೆ ಸೂಕ್ತವಾದೀತು ನಾನು ಕೇವಲ ಪ್ರಹ್ಲಾದ ಪ್ರಿಯನಲ್ಲ -- ಬಕ್ತಪ್ರಿಯ ಅದುಯಾರೇ ಆಗಿರಬಹುದು" ದೈವೀಕರುಣೆಗೆ ಇದಕ್ಕಿಂತಲೂ ಬೇರೆ ಸ್ಪಷ್ಟ ನಿದರ್ಶನ ಬೇಕೇನು?

ನೂರುದಿನಗಳಲ್ಲಿ ಒಂದು ಸಾವಿರದಮುವತ್ತಾರು ಶ್ಲೋಕಗಳನ್ನು ಹೇಳಿದನೆಂದು ತಿಳಿಸಿದೆನಷ್ಟೆ? ಅದೇನು? ಪೂರ್ಣಾವತಾರಿಯಾದ ವೇಣುಲೋಲ ಗೋಪಾಲಬಾಲನ ಲೀಲಾ ವಿಭೂತಿವರ್ಣನೆ ಇದನ್ನು ಬಹಳ ಜನ ಬಾಗವತದ ಸಂಕ್ಷಿಪ್ತರೂಪ -- ಎಂದರು ಯಾರು ಏನುಬೇಕಾದರೂ ಹೇಳಲಿ ಗುರುವಾಯೂರು ನಾದನುಡಿಸಿದ್ದು -- ನಾನು ನುಡಿದದ್ದು -- ಅಷ್ಟೆ. ಆತನೇ ಕೊಟ್ಟ ಶಕ್ತಿಯಿಂದ ಆತನನ್ನೇ ಸ್ತುತಿಸಿದ, ಆತ ಸುಪ್ರೀತನಾದ -- ನನ್ನ ಬೇನೆಯನ್ನು ನಿವಾರಿಸಿದ -- ಇಷ್ಟು ಮುಖ್ಯತತ್ವ. ಈ ಗ್ರಂಥವನ್ನು -- ನಾರಾಯಣೀಯಂ-- ಎಂದು ಜಗತ್ತು ಆದರಿಸಿದ -- ಗೌರವಿಸಿದ -- ಮೆಚ್ಚಿಕೊಂಡಿದೆ ಈ ಗ್ರಂಥದಲ್ಲಿ ಆದ್ಯಂತವಾಗಿ ಪ್ರವಹಿಸಿರುವುದು ಭಕ್ತಿಧಾರೆ ಈ ಗ್ರಂಥದಲ್ಲಿರುವುದು ನನ್ನ ಕಲ್ಪನೆಯಲ್ಲ -- ನನ್ನ ಅನುಬವ ಇದು ಊಹೆಯಿಂದ ಬರೆದ ಗ್ರಂಥವಲ್ಲ -- ಅನುಭವಿಸಿ ಬರೆದ ಕಾವ್ಯ ಕವಿ ತನ್ನ ಅನುಬವಕ್ಕ ಕಾವ್ಯರೂಪ ಕೊಟ್ಟಾಗ -- ಆ ಕಾವ್ಯ ಓದುಗರ ಮನಸ್ಸಿನಲ್ಲಿ ಅದೇ ಅನುಭವ ತರಂಗಗಳನ್ನು ಎಬ್ಬಿಸುತ್ತದೆ ಏಕೆಂದರೆ ಕವಿ -- ಪಾಠಕ ಇಬ್ಬರೂ ಸಮಾನವಾಗಿ ಶ್ರುತಿ ಮಾಡಲಾದ ಎರಡು ವೀಣೆಗಳಿದ್ದಂತೆ -- ಎಂದು ಹಿರಿಯರ ಅಬಿಪ್ರಾಯವಿದೆ

ನಾರಾಯಣೀಯಂ -- ಗ್ರಂಥವನ್ನು ಪರಿಸಮಾಪ್ತಿಗೊಳಿಸಿದಾಗ ನನ್ನ ವಯಸ್ಸು ಕೇವಲ ಇಪ್ಪತ್ತೇಳು ಈ ಚಿಕ್ಕವಯಸ್ಸಿನಲ್ಲೇ ಸ್ವಾಮಿ ನನಗೆಂತೆಂತಹ ಅನುಬವಗಳನ್ನು ಕೊಟ್ಟ!! ಈ ಗ್ರಂಥದಲ್ಲಿ ನಾನು ಸಂದರ್ಭಾನುಸಾರ ಹಲವು ಬಗೆಯ ಛಂದಸ್ಸುಗಳನ್ನು ಬಳಸಿದ್ದೇನೆ ಈ ಛಂದೋವೈವಿಧ್ಯದ ಕಾರಣದಿಂದಾಗಿ ಅನೇಕ ಕಲಾವಿದರು ಈ ಗ್ರಂಥದ ಅನೇಕ ಶ್ಲೋಕಗಳನ್ನು ನಾಟ್ಯಕ್ಕೆ ಹೊಂದಿಸಿಕೊಂಡು ಆನಂದ ಪಡುತ್ತಾರೆ ರಂಜನೀಯವಾದ ಸುಮಧುರಬಾಷೆ ಸಂಸ್ಕೃತ -- ಗೇಯತ್ವ ಆ ಬಾಷೆಯಲ್ಲಿ ಮೂಲ ಸತ್ವ -- ರಾಸಲೀಲೆ -- ನೃಸಿಂಹಾವತಾರ -- ಕಾಳಿಂಗಮರ್ದನ -- ಮುಂತಾದ ಸನ್ನಿವೇಶಗಳಲ್ಲಿ ಛಂದಸ್ಸಿನ ಸೊಬಗಿಗೆ -- ಅನುಪ್ರಾಸ -- ಯಮಕ -- ಗಮಕಗಳಿಗೆ -- ಲಯವಿನ್ಯಾಸಕ್ಕೆ -- ಶಬ್ದ ಪ್ರಯೋಗ ಸೌಂದರ್ಯಕ್ಕೆ ಕವಿ ಕಾರಣನಲ್ಲ -- ಒಂದು ನೆಪಮಾತ್ರ ಮುಖ್ಯಕಾರಣ ಗುರುವಾಯೂರು ಪ್ರಭುಕೃಪೆ ಹದಿನೆಂಟು ಸಹಸ್ರಶ್ಲೋಕಗಳಿಂದ ಅಲಂಕೃತವಾಗಿರುವ ಬಾಗವತ ಮತ್ತು ನಾರಾಯಣೀಯಂ -- ಎರಡೂ ಒಂದೇ ಪ್ರಭಾವ ಬೀರುತ್ತವೆ ಅಧ್ಯಾತ್ಮ ಹಾಗೂ ಕಾವ್ಯ ಈ ಎರಡೂ ದೃಷ್ಟಿಯಿಂದ ಈ ಎರಡು ಗ್ರಂಥಗಳೂ ಒಂದೇ ಮಟ್ಟದಲ್ಲಿವೆ -- ಯೆಂದು ಅನೇಕ ವಿದ್ವನ್ಮಣಿಗಳು ತೀರ್ಮಾನಮಾಡಿದ್ದಾರೆ

ನನ್ನ ಕತೆ ಕೇಳಿ ತಮಗೆ ಬೇಸರ ಬಂದೀತೇನೋ ಎಂಬ ಅಳುಕು ನನ್ನನ್ನು ಬಾದಿಸುತ್ತದೆ ಇಲ್ಲವಾದರೆ ಇನ್ನೂ ಹೇಳಬೇಕಾದ್ದು ಬೆಟ್ಟದಷ್ಟಿದೆ ಗುರುವಾಯೂರು ಪ್ರಬು ನನ್ನ ಮೇಲೆ ಅದೆಷ್ಟು ಕೃಪ ಮಾಡಿದ್ದಾನೆ -- ಅದರಿಂದ ನನಗೆಷ್ಟು ಆನಂದವಾಯ್ತು -- ಅದರ ಒಂದೆರಡು ಹನಿಗಳನ್ನು ತಮ್ಮ ಮುಂದಿಟ್ಟಿದ್ದೇನೆ ಆತನನ್ನ ನಂಬಿ -- ಭಜಿಸಿ -- ಧನ್ಯರಾಗಿ -- ಇಷ್ಟು ತಾನೆ ಎಲ್ಲರೂ ಹೇಳುವುದು" ಇಷ್ಟೆಲ್ಲ ಹೇಳುವ ಭರಾಟೆಯಲ್ಲಿ ಮುಖ್ಯವಾದ ಒಂದು ವಿಚಾರ ಮರೆತೆ -- ನನ್ನ ಹೆಸರೇ ಹೇಳಲಿಲ್ಲ -- ಅಲ್ಲವೇ?

ನನ್ನನ್ನು ಮೆಪ್ಪತ್ತೂರು ನಾರಾಯಣ ಭಟ್ಟಾತ್ರಿ -- ಎಂದು ಕರೆಯುತ್ತಾರೆ ನನ್ನ ಜನನ ಸುಮಾರು ಕ್ರಿ ಶ 1560 -- ಎಂದು ನೆನಪು

ಸಂದರ್ಶಿಸಿ ಆನಂದಿಸಿ

# ಪ್ರಾಕ್ತನ ವಸ್ತು ಸಂಗ್ರಹಾಲಯ

ಸನಾತನ ಧರ್ಮದ ಮೌಲ್ಯ, ಹಿರಿಮೆ, ಪರಂಪರೆ, ಸಂಸ್ಕೃತಿಗಳ ಪ್ರಸಾರದಲ್ಲಿ ತಿರುಮಲೆ ತಿರುಪತಿ ದೇವಸ್ಥಾನಗಳು ಹಲವು ರೀತಿಯಲ್ಲಿ ಕೆಲಸಮಾಡುತ್ತಿದ್ದು, ಈ ಉದ್ದೇಶ ಸಾಧನೆಗಾಗಿ ತಿರುಮಲೆ ಹಾಗೂ ತಿರುಪತಿಗಳಲ್ಲಿ ಪುರಾವಸ್ತು ಪ್ರದರ್ಶನಶಾಲೆಗಳನ್ನು ಏರ್ಪಡಿಸಲಾಗಿದೆ

ತಿರುಮಲೆಯ ಸಾವಿರ ಕಂಬದ ಸಂಭಾಂಗಣದಲ್ಲಿ ತಿರುಪತಿ ತಿರುಮಲೆಗಳ ಪರಿಸರದಲ್ಲಿ ದೊರೆತ ಎಲ್ಲ ಪುರಾವಸ್ತುಗಳನ್ನು, ಮಾನವ ಶಾಸ್ತ್ರ, ಪ್ರಾಕ್ ವಸ್ತುಗಳನ್ನೂ ನೆಲ, ಸಸ್ಯಗಳ ಬಗೆಗಳನ್ನೂ, ವಾಸ್ತು ವಿಗ್ರಹ ಶಿಲ್ಪಗಳನ್ನೂ ದೇವಾಲಯಗಳ ಆಚಾರ ವಿಚಾರಗಳನ್ನೂ ಸಂಗ್ರಹಿಸಲಾಗಿದೆ ಇಲ್ಲಿ ಅಪರೂಪದ ಮರದ ಕೆತ್ತನೆಗಳೂ, ಶಿಲ್ಪಗಳೂ, ಲೋಹ ವಿಗ್ರಹಗಳೂ, ಸಂಗೀತದ ವಿವಿಧ ಪ್ರಾಚೀನ ವಾದ್ಯ ವಿಶೇಷಗಳೂ, ತಿ ತಿ ದೇ ಮತ್ತಿತರ ಕಡೆಗಳಲ್ಲಿ ದೊರೆತ ಆಯುಧಗಳೂ ಪ್ರದರ್ಶಿತವಾಗಿವೆ ಬೇರೆ ಬೇರೆ ಜಮೀಂದಾರರಿಂದ ದಿವಂಗತ ವೇಟೂರಿ ಪ್ರಭಾಕರಶಾಸ್ತ್ರಿಯವರು ಸಂಗ್ರಹಿಸಿದ ವಸ್ತುಗಳೂ ಇಲ್ಲಿವೆ ೧೯೮೦ ಡಿಸೆಂಬರ್ ೨೭ ರಂದು ಅಂದಿನ ರಾಷ್ಟ್ರಾಧ್ಯಕ್ಷರಾಗಿದ್ದ ಶ್ರೀ ಎನ್ ಸಂಜೀವರೆಡ್ಡಿಯವರು ಈ ವಸ್ತು ಪ್ರದರ್ಶನ ಶಾಲೆಯನ್ನು ಉದ್ಘಾಟಿಸಿದರು

ತಿರುಪತಿಯ ಶ್ರೀ ಗೋವಿಂದರಾಜಸ್ವಾಮಿ ದೇವಾಲಯದ ಬಳಿಯ ಕಚೇರಿನಮ್ಮಾಳ್ವಾರ್ ದೇವಾಲಯದ ಪೆರಿಯಾಳ್ವಾರ್ ಮಂಟಪದಲ್ಲಿ, ವೈಷ್ಣವ ದೇವಾಲಯ ಕಲೆಗೆಂದು ಮೀಸಲಾದ ಶ್ರೀ ವೆಂಕಟೇಶ್ವರ ವಾಸ್ತುಕಲಾವಸ್ತು ಸಂಗ್ರಹಾಲಯವನ್ನು ಏರ್ಪಡಿಸಲಾಗಿದೆ ಈ ಸಂಗ್ರಹಾಲಯದಲ್ಲಿ ವೈಷ್ಣವತೆಯ ವೈಶಿಷ್ಟ್ಯವನ್ನು ವಿವರಿಸಲು ಪ್ರಯತ್ನಿಸಲಾಗಿದೆ ಇದರ ಹಲವು ವಿಭಾಗಗಳೆಂದರೆ---

ವಾಸ್ತುಶಾಸ್ತ್ರ ಈ ವಿಭಾಗದಲ್ಲಿ ದೇವಾಲಯ ನಿರ್ಮಾಣದಲ್ಲಿನ ಯೋಜನಾವಿವರಗಳನ್ನು ನೀಡಲಾಗಿದೆ ಆಗಮ ಹಾಗೂ ಶಿಲ್ಪಶಾಸ್ತ್ರಗಳು ದೇವಾಲಯದ ನಿರ್ಮಾಣದ ಸ್ಥಳ ನಿರ್ಧಾರ, ಭೂಶುದ್ಧಿ, ವಿಗ್ರಹಗಳ ದಿಕ್ಕು ಹಾಗೂ ಭೂಮಿಯ ನಿರ್ದೇಶನಗಳನ್ನು ನೀಡಿದ್ದು, ಸೂಕ್ತ ವಿವರ ಪಟ್ಟಿಗಳು ಹಾಗೂ ಮಾದರಿಗಳಿಂದ ಈ ವಿವರಗಳನ್ನು ಸ್ಪಷ್ಟಪಡಿಸಲಾಗಿದೆ

ಶಿಲ್ಪಶಾಸ್ತ್ರ ಈ ವಿಭಾಗದಲ್ಲಿ ವಿಗ್ರಹಗಳ ಉದ್ದಳತೆಗಳು ಸಾಪೇಕ್ಷವಾದುದೆಂಬುದನ್ನು ವಿವರಿಸಿ ಅವು ಸ್ಥಳೀಯ ಹಾಗೂ ಯಾಜಮಾನ್ಯವನ್ನು ಅನುಸರಿಸುವುದೆಂದು ವಿವರಿಸಲಾಗಿದೆ

ವಿಗ್ರಹಗಳು ವಿಷ್ಣುವಿನ ಹಲವಾರು ರೂಪಗಳ, ಭಂಗಿಗಳೂ, ಆಭರಣಗಳೂ ವ್ಯಾವೃತವಾಗಿವೆ

ಆಳ್ವಾರ್‌ಗಳು ವಿಶಿಷ್ಟಾದ್ವೈತ ತತ್ವದ ಪ್ರಪತ್ತಿ ಮಾರ್ಗಕ್ಕೆ ಆಳ್ವರರ ಸಂದೇಶಗಳೇ ಆಧಾರ ಶ್ರೀ ರಾಮಾನುಜಾಚಾರ್ಯರು ಆಳ್ವಾರರನ್ನು ಆರಾಧಿಸುತ್ತಿದ್ದರು

ಸಮಯಾಚಾರಗಳು ಸನಾತನದ ಧರ್ಮದಲ್ಲಿ ಹುಟ್ಟಿನಿಂದ ಸಾವಿನವರೆಗೆ ಹದಿನಾರು ಸಂಸ್ಕಾರಗಳಿಗೆ ಪ್ರಾಮುಖ್ಯವಿದೆ ವಿಷ್ಣುದೇವಾಲಯದಲ್ಲಿ ಬಳಸಲಾಗುವ ಎಲ್ಲ ಪರಿಕರಗಳ ವಿವರಗಳೂ, ಹೋಮ ಕುಂಡ ಹಾಗೂ ವಾಹನಗಳ ಮಾದರಿಗಳೂ ಇವೆ ೧೦೮ ದಿವ್ಯಕ್ಷೇತ್ರಗಳೂ ೧೦೮ ತಿರುಪತಿಗಳೆಂದೇ ಪ್ರಸಿದ್ಧವಾಗಿರುವ ವೈಷ್ಣವ ಕ್ಷೇತ್ರಗಳ ಚಿತ್ರಗಳ ಮೂಲಕ ಈ ದೇವಾಲಯಗಳ ವಾಸ್ತುಶಿಲ್ಪದ ಪರಿಚಯವನ್ನು ನೀಡಲಾಗಿದೆ

ಕಲೆ ಹರಿದಾಸರ ಹಿರಿಮೆಯನ್ನೂ, ಭರತನಾಟ್ಯಾದಿ ಕಲೆಗಳನ್ನೂ ವಿವರಿಸಲಾಗಿದೆ ವಿಷ್ಣು, ಶಕ್ತಿ, ಷಣ್ಮುಖ, ಮೊದಲಾದ ಬನೇ ಶತಕದ ವಿಗ್ರಹಗಳಿಂದ ಆರಂಭವಾದ ಸಂಗ್ರಹ ಆಕರ್ಷಕವಾಗಿದೆ ೩ನೇ ರಾಜರಾಜನ ಕುಂತ್ರಪಾಕಂ ದೇವಾಲಯದಿಂದ ಸಂಗ್ರಹಿತವಾದ ಚಾರಿತ್ರಿಕ ವಿವರಗಳಿವೆ

ಪರಂಪರೆಯ ಪರಿಚಯ ಹೊಂದಿರಿ --- ಒಮ್ಮೆ ಭೇಟಿ ನೀಡಿರಿ.

---

**ಕಾಲ : ಬೆಳಗ್ಗೆ ೮ ರಿಂದ**
**ರಾತ್ರಿ ೮ ರ ವರೆಗೆ**

**ಟಿಕೆಟ್ ರೂ. ೧--೦೦ (ಹಿರಿಯರಿಗೆ)**
**„ „ ೦--೫೦ (ಕಿರಿಯರಿಗೆ)**

# ಮಹಾವಿಷ್ಣುವಿನ
# ಇಪ್ಪತ್ನಾಲ್ಕು ಅವತಾರಗಳು

---ವಿದ್ವಾನ್ 'ರಘುಸುತ'.

ಪರಮಾತ್ಮನ ದಶಾವತಾರಗಳ ಬಗ್ಗೆ ನಾವೆಲ್ಲರೂ ಕೇಳಿದ್ದೇವೆ ಆದರೆ ಆ ಪರಮಾತ್ಮನ ಇಪ್ಪತ್ನಾಲ್ಕು ಅವತಾರಗಳು ಯಾವುವು -- ಎಂಬುದು ಎಲ್ಲ ಆಸ್ತಿಕರಿಗೂ, ಬಗವದ್ಭಕ್ತರಿಗೂ ಕುತೂಹಲ ಪ್ರಶ್ನೆ. ನಾವು ಪೂಜಿಸುವುದೂ ಕೂಡ ದಶಾವತಾರಗಳಲ್ಲಿನ ನರಸಿಂಹ, ಶ್ರೀರಾಮ, ಶ್ರೀಕೃಷ್ಣರನ್ನೆ ಆದರೂ ಇತರೇ ದಶವತಾರಿಗಳ ಬಗ್ಗೆಯೂ ನಮ್ಮ ಹಿಂದಿನ ಆಚಾರ್ಯರು ಸಾಕಷ್ಟು ಪ್ರಾರ್ಥನೆಗಳು, ಸ್ತೋತ್ರಗಳನ್ನು ರಚಿಸಿದ್ದಾರೆ. ಆದರೂ ಪರಮಾತ್ಮನ ಲೀಲಾ ವಿನೋದಗಳ ಪ್ರದರ್ಶನಕ್ಕಾಗಿ, ಆತನ ಬ್ರಹ್ಮಾಂಡದ ಸರ್ವ ಕಾರ್ಯಗಳ ನಿರ್ವಹಣೆಗಾಗಿ, ತನ್ನ ಕೆಲವು ಅಂಶಗಳನ್ನು ಬಕ್ತರ ಆಕಾರದಲ್ಲಿ ಋಷಿ ಮುನಿಗಳ ಆಕಾರದಲ್ಲಿ ನೀಡಿದ. ಇವು ಉಳಿದ ಹದಿನಾಲ್ಕು ಅವತಾರಗಳಿಗೆ ನಾಂದಿಯಾಯಿತು ಒಟ್ಟಾರೆ ಇವೆಲ್ಲ ಶ್ರೀ ಮಹಾವಿಷ್ಣುವಿನ ಇಪ್ಪತ್ನಾಲ್ಕು ಲೀಲಾ ಅವತಾರಗಳೆಂದೇ ಪ್ರಸಿದ್ಧಿ ಪಡೆದಿವೆ

ಬಾಗವತ ಪುರಾಣವು ಮಹಾವಿಷ್ಣುವಿನ ಬೇರೆ ಬೇರೆ ಅವತಾರಗಳ ಕಾಲಾನುಕ್ರಮಣಿಕೆಯನ್ನು ನೀಡಿದೆ. ಇದರಲ್ಲಿ ಮುಖ್ಯ ದಶಾವತಾರಗಳೆಂದರೆ ೧ ಮತ್ಸ್ಯ (ಮೀನು) ೨ ಕೂರ್ಮ (ಆಮೆ) ೩ ವರಾಹ (ಹಂದಿ) ೪ ನರಸಿಂಹ (ಮಾನವ--ಸಿಂಹ) ೫ ವಾಮನ (ಕುಳ್ಳ) ೬ ಪರಶುರಾಮ (ಪರಶುವನ್ನು ಹೊಂದಿರುವ ರಾಮ ೭ ಶ್ರೀರಾಮ (ರಾಮಾಯಣದ ನಾಯಕ) ೮ ಶ್ರೀಕೃಷ್ಣ ೯ ಬುದ್ಧ ( ರಾಜಕುಮಾರ--ಸನ್ಯಾಸಿ) ಮತ್ತು ೧೦ ಕಲ್ಕಿ (ಕಲಿಯುಗದ ಅಂತ್ಯದಲ್ಲಿ ಕಂಡುಬರುವ ಶ್ವೇತಾಶ್ವ ರೋಹಿ ನಾಯಕ)



## ೧. ಮತ್ಸ್ಯ.

ಈತನಿಗೆ ಭಗವಾನ್ ಮತ್ಸ್ಯನೆಂದೇ ಹೆಸರು. ಈ ಅವತಾರದ ಮುಖ್ಯಗುರಿ ಜಲಪ್ರಳಯದಿಂದ ನಾಶವಾಗುವ ವೈವಸ್ವತ ಮನುವನ್ನು ರಕ್ಷಿಸುವುದೇ ಆಗಿತ್ತು. ಇದರೊಂದಿಗೆ ಮತ್ತೂ ಒಂದು ಕಾರ್ಯವನ್ನು ಬಗವಾನನು ನಿರ್ವಹಿಸಬೇಕಾಗಿತ್ತು. ಪ್ರಳಯದ ಸಮಯದಲ್ಲಿ ಸಾಗರಗಳಾಳದಲ್ಲಿ ಮಲಗಿದ್ದ ಬ್ರಹ್ಮನು ತನ್ಮಯ ತಪಸ್ಸಿನಲ್ಲಿ ಲೀನವಾಗಿದ್ದನು ಆಗ ಅವನ ಬಾಯಿಗಳಿಂದ ಹೊರ ಬಂದುವೇ ವೇದಗಳು. ಈ ಸಮಯವನ್ನೇ ಕಾಯುತ್ತಿದ್ದ ಬಯಾನಕ ರಾಕ್ಷಸ ಸೋಮಕನು ಆ ವೇದಗಳನ್ನು ಕದ್ದು ಪಾತಾಳದಲ್ಲಿ ಅಡಗಿದನು. ಆಗ ಬಗವಾನ್ ವಿಷ್ಣುವು ಮತ್ಸ್ಯಾವತಾರವನ್ನು ಎತ್ತಿ, ಆ ರಾಕ್ಷಸ ಸಂಹಾರ ಮಾಡಿ ವೇದಗಳನ್ನು ಹಿಂತಿರುಗಿಸಿದನು. ಅಂತೆಯೇ ಬ್ರಹ್ಮನ ನೈಚ್ಯಾನುತಯನ್ನು ರಾಜಾ ಸತ್ಯವ್ರತ ಹಾಗೂ ಸಪ್ತಋಷಿಗಳಿಗೆ ಬೋಧಿಸಿದನು.

## ೨. ಕೂರ್ಮ :

ಜಲಪ್ರಳಯದ ಸಮಯದಲ್ಲಿ ಬಹಳಷ್ಟು ಅಮೂಲ್ಯ ವಸ್ತುಗಳು, ಅಂಶಗಳು ನಾಶವಾದುವು. ಅವುಗಳನ್ನು ಮತ್ತೆ ಪಡೆಯುವುದೇ ಪರಮಾತ್ಮನ ಈ ಅವತಾರದ ಗುರಿಯಾಯಿತು ಸಮುದ್ರಮಂದನದ ಸಮಯದಲ್ಲಿ ಬೃಹದಾಕಾರದ ಮಂದರ ಪರ್ವತವನ್ನು ಕ್ಷೀರಸಮುದ್ರದಲ್ಲಿ ಕಡೆಗೋಲಾಗಿ ಹಾಕಲಾಯಿತು. ಕೂಡಲೇ ಅದು ಮುಳುಗತೊಡಗಿತು. ಆಗ ದೇವತೆಗಳು ಹಾಗೂ ರಾಕ್ಷಸರ ಪ್ರಾರ್ಥನೆಯಂತೆ ಬಗವಾನ್ ಕೂರ್ಮನು ತನ್ನ ಬೆನ್ನಿನ ಮೇಲೆ ಆ ಪರ್ವತವನ್ನು ಹೊತ್ತನು



ಸುತ್ತುವಾಗ ಪರ್ವತವು ಚುಚ್ಚಿದಂತಲ್ಲ ಪರಮಾತ್ಮನಿಗೆ ಹೆಚ್ಚು ಸಂತೋಷವಾಗತೊಡಗಿತು. ಇದರಿಂದ ಸ್ವಲ್ಪ ಜೋಂಪಿನಲ್ಲಿದ್ದ ಪರಮಾತ್ಮನು ಹೆಚ್ಚು ಉಸಿರಾಡತೊಡಗಿದನು. ಇದರ ಪರಿಣಾಮವಾಗಿಯೇ ಇಂದಿಗೂ ಕೂಡ ಸಮುದ್ರದ ನೀರು ಏರಿ -- ಇಳಿದು, ಉಬ್ಬರ ಇಳಿತಗಳನ್ನು ನಿರ್ಮಿಸುತ್ತಿದ್ದ ರಾತ್ರಿ -- ಹಗಲುಗಳಾದಂತ ಏರುವಿಕೆ -- ಇಳಿಯುವಿಕೆ ಇಂದಿಗೂ ಮುಂದುವರಿದೇ ಇದೆ

## ೩. ವರಾಹ :

ಹಿರಣ್ಯಾಕ್ಷನೆಂಬುವನೊಬ್ಬ ಬಯಂಕರ ರಾಕ್ಷಸನು ಇವನು ಬೂಮಿ (ಬೂದೇವಿ) ಯನ್ನು ಸಾಗರದಾಳಕ್ಕೆ ಎಳೆದುಕೊಂಡು ಹೋದ. ಆ ಬೂದೇವಿಯನ್ನು ರಕ್ಷಿಸುವುದಕ್ಕಾಗಿ ಬಗವಾನನು ವರಾಹ ಅವತಾರವನ್ನು ಎತ್ತಿದ

"ಅಪಾರ ಆಳದಲ್ಲಿ ಮುಳುಗಿರುವ ಬೂಮಿಯನ್ನು ನಾನು ಹೇಗೆ ತಾನೇ ಮೇಲೆತ್ತಬಲ್ಲೆ? " ಎಂದು ಚತುರ್ಮುಖ ಬ್ರಹ್ಮನು ಯೋಚಿಸತೊಡಗಿದನು ಆತನಿಗೆ ಏನು ಮಾಡಬೇಕೆಂಬುದೇ ಹೊಳೆಯಲಿಲ್ಲ. ಈ ಕಾರ್ಯವನ್ನು ಶ್ರೀಹರಿಯೇ ಮಾಡ

  

# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ

## ತಿರುಚಾನೂರು

ಅಲಮೇಲು ಮಂಗಾಪುರವೆಂದು ಹೆಸರಾದ ಈ ಊರು ತಿರುಪತಿಯಿಂದ ನಾಲ್ಕು ಮೈಲು ದೂರದಲ್ಲಿದೆ ತಿರುಮಲೆಯ ದರ್ಶನವಾದ ಮೇಲೆ ಈ ಊರನ್ನು ದರ್ಶಿಸಿ ಪೂರ್ಣಕಾಮರಾಗುವುದು ಪರಂಪರೆ

### ಆಲಯ ಕಾರ್ಯಕ್ರಮ.

| | |
|---|---|
| ಸುಪ್ರಭಾತ | ಬೆಳಗ್ಗೆ 5--00 ಗಂಟೆಗೆ |
| ಸಹಸ್ರನಾಮಾರ್ಚನೆ | ಬೆಳಗ್ಗೆ 5--30 ಗಂಟೆಗೆ |
| (ರೂ 6--00 ಶುಲ್ಕದಿಂದ ನಾಲ್ಕು ಮಂದಿಗೆ ಪ್ರವೇಶ) | |
| 1ನೇ ಗಂಟೆ | ಬೆಳಗ್ಗೆ 6--00 ಗಂಟೆಗೆ |
| ಸರ್ವದರ್ಶನ | ಬೆಳಗ್ಗೆ 6--30 ಗಂಟೆಗೆ |
| ಶುದ್ಧಿ 2ನೇ ಗಂಟೆ | ಬೆಳಗ್ಗೆ 11--30 ಗಂಟೆಗೆ |
| ಸರ್ವದರ್ಶನ | ಮಧ್ಯಾಹ್ನ 12--00 ಗಂಟೆಗೆ |
| 3ನೇ ಗಂಟೆ | ಸಂಜೆ 6--00 ಗಂಟೆಗೆ |
| ಸರ್ವದರ್ಶನ | ಸಂಜೆ 6--30 ಗಂಟೆಗೆ |
| ಶುದ್ಧಿ | ರಾತ್ರಿ 8--45 ಗಂಟೆಗೆ |
| ಏಕಾಂತ | ರಾತ್ರಿ 9--00 ಗಂಟೆಗೆ |

### ಶುಕ್ರವಾರಗಳಲ್ಲಿ

| | |
|---|---|
| ಅಭಿಷೇಕ | ಬೆಳಗ್ಗೆ 9--00 ಗಂಟೆಗೆ |
| (ರೂ 100/-- ಶುಲ್ಕದಿಂದ ಒಬ್ಬರಿಗೆ ಪ್ರವೇಶ) | |
| (ಅಭಿಷೇಕಾನಂತರ ದರ್ಶನ ಒಬ್ಬರಿಗೆ ರೂ 5/--) | |
| ಎರಡನೇ ಗಂಟೆ | ಬೆಳಗ್ಗೆ 11--00 ಗಂಟೆಗೆ |
| ಸರ್ವದರ್ಶನ | ಬೆಳಗ್ಗೆ 11--30 ಗಂಟೆಗೆ |
| ಊಂಜಲ್‌ಸೇವೆ | ಸಂಜೆ 7--00 ಗಂಟೆಗೆ |
| (ಮುಕುರ ಮಂಟಪದಲ್ಲಿ, ಶುಲ್ಕ ರೂ 150/--) | |
| (5 ಗ್ರಾಂಗಳ ಬೆಳ್ಳಿಯ ಪದಕ ಬಹುಮಾನ ಉಂಟು) | |
| 3ನೇ ಗಂಟೆ | ರಾತ್ರಿ 8--00 ಗಂಟೆಗೆ |
| ಸರ್ವದರ್ಶನ | ರಾತ್ರಿ 8--30 ಗಂಟೆಗೆ |
| ಶುದ್ಧಿ | ರಾತ್ರಿ 9--30 ಗಂಟೆಗೆ |
| ಏಕಾಂತಸೇವೆ | ರಾತ್ರಿ 9--45 ಗಂಟೆಗೆ |

**ಪೇಷ್ಕಾರ್.**

ಬಲ್ಲವನು ಎಂದು ಆ ಪರಾತ್ಪರನನ್ನು ಸ್ಮರಿಸಿದನು ಕೂಡಲೇ ಚತುರ್ಮುಖ ಬ್ರಹ್ಮನ ಮೂಗಿನ ಹೊಳ್ಳೆಯಿಂದ ಹೆಬ್ಬೆರಳ ಗಾತ್ರದ ಹಂದಿ ರೂಪವೊಂದು ಹೊರಬಂದಿತು ಇದನ್ನು ನೋಡಿ ಬ್ರಹ್ಮನು ಆಶ್ಚರ್ಯಗೊಂಡ ನೋಡ ನೋಡುತ್ತ ಅದು ಬೃಹದಾಕಾರದ, ಆನೆಗಿಂತಲೂ ದೊಡ್ಡದಾದ ಆಕಾರವನ್ನು ಪಡೆಯಿತು ಇದೇನಿರಬಹುದೆಂದುಬಳಿಯಲ್ಲಿದ್ದ ಸ್ವಾಯಂಭುವ ಮನುವಿನೊಂದಿಗೆ ಸಮಾಲೋಚಿಸಿದ ಕೂಡಲೇ ಭಗವಾನ್ ವರಾಹನು ಪರ್ವತಾಕಾರವನ್ನು ಪಡೆದನು ಭಗವಾನನು ಆ ಕೂಡಲೇ ಸಕಲ ಲೋಕಗಳೂ ತತ್ತರಿಸುವಂತೆ ಗರ್ಜಿಸಿದನು ಆ ಸಮಯದಲ್ಲಿ ಎಲ್ಲ ಋಷಿ, ಮುನಿಗಳು, ದೇವಾದಿದೇವತೆಗಳು ಭಗವಾನ್ ವರಾಹನನ್ನು ಸ್ತುತಿಸತೊಡಗಿದರು

ಕೂಡಲೇ ವರಾಹನು ದೈತ್ಯ ಹಿರಣ್ಯಾಕ್ಷನನ್ನು ಸಂಹರಿಸಿ, ಭೂಮಿಯನ್ನು ಮೇಲೆತ್ತಿದನು

## ೪. ನರಸಿಂಹ :

ಭಗವಾನ್ ನರಸಿಂಹನು ಹಿರಣ್ಯ ಕಶಿಪುವಿನ ಸಂಹಾರಕ್ಕಾಗಿಯೇ ಅವತರಿಸಿದವನು ಎಷ್ಟೇ ಬುದ್ಧಿವಂತಿಕೆಯಿಂದ ಮರಣವನ್ನು ತಪ್ಪಿಸಿಕೊಳ್ಳಲು ಜೀವಿಯು ವರಗಳ ದುರಹಂಕಾರದಿಂದ, ಮೈಮರೆತು ತನಗೆ ಯಾವುದೇ ರೀತಿಯ ಸಾವು ಇಲ್ಲವೆಂದು ತಿಳಿದಾಗ ಅವನ ಪ್ರಜ್ಞೆಯನ್ನೂ ಮೀರಿ ಮೃತ್ಯುವು ಅವನನ್ನು ಕಬಳಿಸಬಲ್ಲದು ಎನ್ನುವುದಕ್ಕೆ ನರಸಿಂಹ ಅವತಾರವೇ ಉದಾಹರಣೆ ಮಾನವನೂ, ಮೃಗವೂ ಅಲ್ಲದ ನರ -- ಸಿಂಹನಿಂದ, ಹಗಲೂ -- ರಾತ್ರಿಯೂ ಅಲ್ಲದ ಸಮಯದಲ್ಲಿ, ಅರಮನೆ -- ಬೀದಿಯೂ ಅಲ್ಲದ ಹೊಸಿಲ ಮೇಲೆ ನರಸಿಂಹನ ಉಗುರುಗಳಿಗೆ ಹಿರಣ್ಯ ಕಶಿಪುವು ಬಲಿಯಾದುದು, ಸ್ವತಃ ಮಗನೇ ವಿಷ್ಣುಭಕ್ತನಾಗಿ, ಅವನಿಗೆ ಎದುರಾದುದು,ವಿಧಿಯ ಸಂಕಲ್ಪ, ಅಂತೆಯೇ ಭಗವಾನ್ ನರಸಿಂಹನು ಪ್ರಹ್ಲಾದನನ್ನು ಅನುಗ್ರಹಿಸಿದಂತೆ, ಸಕಲ ಜೀವಿಗಳನ್ನೂ ರಕ್ಷಿಸಬೇಕೆಂದು ಎಲ್ಲರ ಪ್ರಾರ್ಥನೆ

## ೫. ವಾಮನ :

ಬಲಿ ಚಕ್ರವರ್ತಿಯು ತನ್ನ ತಪಸ್ಸು ಮತ್ತು ಧ್ಯಾನಗಳಿಂದ ದೇವತೆಗಳ ದೇವತ್ವವನ್ನೇ ವಶಪಡಿಸಿಕೊಂಡಿದ್ದ ಮುಂದೆ ಇದು ದೇವತೆಗಳಿಗೇ ಅಪಾಯಕಾರಿಯಾಗುವಂತಹುದಾಗಿತ್ತು ದೇವತೆಗಳ ಶಕ್ತಿಯನ್ನು ದೇವತೆಗಳಿಗೇ ಹಿಂತಿರುಗಿಸಲು ಹಾಗೂ ಬಲಿಯನ್ನು ಪಾತಾಳಕ್ಕೆ ತಳ್ಳಲು ಭಗವಾನ್ ವಾಮ



ನನ ಅವತಾರವಾಗಿ ಈ ಗುರಿಯು ನೆರವೇರಿಸಲ್ಪಟ್ಟಿತು

## ೬. ಪರಶುರಾಮ :

ಕ್ಷತ್ರಿಯ ರಾಜರು ಭೂಮಿಯನ್ನು ಬಹಳವಾಗಿ ತುಳಿದು ಹಿಡಿದಿದ್ದರು ಅವರುಗಳ ಅನ್ಯಾಯ ಅತ್ಯಾಚಾರಗಳು ಬಹಳವಾದುದರಿಂದ ಅವರನ್ನು ಶಂಕರನಿಂದ ಚಕ್ರಸಮಾನ ಪರಶುವನ್ನು ಪಡೆದು ಅದರ ಸಹಾಯದಿಂದ ಇಪ್ಪತ್ತೊಂದು ಸಲ ಪ್ರಪಂಚ ಪ್ರದಕ್ಷಿಣೆ ಮಾಡಿ ದುಷ್ಟ ಕ್ಷತ್ರಿಯರನ್ನೆಲ್ಲ ಸಂಹಾರ ಮಾಡಿದನು ಅವರ ಅತ್ಯಾಚಾರಗಳಿಂದ ಭೂಮಿಯನ್ನು ಪವಿತ್ರಗೊಳಿಸಿದನು ಇದು ಈ ಅವತಾರದ ಗುರಿಯಾಯಿತು

## ೭. ಶ್ರೀರಾಮ :

ಶ್ರೀರಾಮನು ಮರ್ಯಾದಾ ಪುರುಷೋತ್ತಮನೇ ಅಲ್ಲದೆ ಆರು ಅತಿಮಾನವ ಶಕ್ತಿಗಳನ್ನು ಪಡೆದ ಮಹದವತಾರಿಯಾದನು ಪರಮಾತ್ಮನ ಎಲ್ಲ ಲಕ್ಷಣಗಳ ಸಾಕಾರ ರೂಪಿಯೇ ಶ್ರೀರಾಮ ರಾವಣ ಸಂಹಾರಾರ್ದವಾಗಿ ಜನಿಸಿದವನಾದರೂ, ಆದರ್ಶ ರೀತಿಯಲ್ಲಿ ರಾಜ್ಯಭಾರ ಮಾಡಿ, ರಾಮರಾಜ್ಯವೆಂದರೆ ಹೇಗಿರಬೇಕು ಎಂಬುದನ್ನು ಸಾಕಾರರೂಪವಾಗಿ ತೋರಿಸಿದ ಅವತಾರವಿದು

## ೮. ಶ್ರೀಕೃಷ್ಣ :

ಕೃಷ್ಣಾವತಾರದ ಗುರಿ ಮುಖ್ಯವಾಗಿ ಕಂಸ ಮತ್ತಿತರ ರಾಕ್ಷಸರ ಸಂಹಾರವೇ ಅಲ್ಲದೆ ಭಗವದ್ಗೀತೆಯ ಮುಖಾಂತರ ಅದ್ಭುತ ಸಂದೇಶವನ್ನು ಸಕಲ ಜನಾಂಗಗಳಿಗೂ ಪರಮಾತ್ಮನು ಪರಡಿದನು ಸರ್ವತೋಮುಖ ಪ್ರತಿಭೆಯ ಪ್ರತೀಕವಾಗಿದ್ದನು ಶ್ರೀಕೃಷ್ಣ ದುಷ್ಟಶಿಕ್ಷಣ ಹಾಗೂ ಶಿಷ್ಟ ರಕ್ಷಣೆಯನ್ನು ಹೇಗೆ ಸಾಧಿಸಬೇಕೆಂಬುದನ್ನು ಪ್ರತ್ಯಕ್ಷ ಪ್ರಮಾಣಗಳಿಂದ ತೋರಿಸಿದ್ದಾನೆ ಇದಲ್ಲದೆ ಪ್ರಪಂಚದ ಭಕ್ತಿ ಪಂಥದ ಕೇಂದ್ರ ಬಿಂದುವೂ ಈತನಾಗಿದ್ದಾನೆ

## ೯. ಬುದ್ಧ :

ಪ್ರಾಣಿಗಳ ಬಲಿಯನ್ನು ತಪ್ಪಿಸಿ, ಜನತೆಗೆ ಶಾಂತಿ, ಅಹಿಂಸೆಯನ್ನು ಬೋಧಿಸುವುದೇ ಭಗವಾನ್ ಬುದ್ಧನ ಅವತಾರದ ಗುರಿಯಾಗಿತ್ತು ರಾಜಕುಮಾರನಾಗಿ ಜನಿಸಿದರೂ ಪ್ರಜೆಗಳಿಗೆ ತುಂಬಾ ಹತ್ತಿರದವನಾದ ಬುದ್ಧನು ಯಾವ ರಾಜನೂ, ರಾಜಕುಮಾರನೂ ತೋರಿಸದಂತಹ ಪ್ರಭಾವವನ್ನು ಪ್ರಜೆಗಳ ಮೇಲೆ ಬೀರಿದನು

## ೧೦. ಕಲ್ಕಿ :

ಇದು ಕಲಿಯುಗದ ಅಂತ್ಯದಲ್ಲಿ ಆಗುವ ಅವತಾರ ದುಷ್ಟಶಕ್ತಿಗಳ ನಾಶಮಾಡಿ, ಸದ್ಗುಣ ಪಾವಿತ್ರ್ಯತೆಗಳನ್ನು ಸ್ಥಾಪಿಸುವುದೇ ಈ ಅವತಾರದ ಗುರಿಯಾಗಿದೆ

ಈ ಹತ್ತು ಅವತಾರಗಳೊಂದಿಗೆ ಇನ್ನೂ ಹದಿನಾಲ್ಕು ಅವತಾರಗಳನ್ನು ಜೋಡಿಸಿ, ಒಟ್ಟು ಇಪ್ಪತ್ನಾಲ್ಕು ಲೀಲಾ ಅವತಾರಗಳನ್ನು ತೋರಿಸಲಾಗಿದೆ

## ೧೧. ಸನಕ, ಸನಂದನ, ಸನತ್ಕುಮಾರ, ಸನಾತನ :





ಸೃಷ್ಟಿಯ ಆದಿಯಲ್ಲಿ ಪಿತಾಮಹನಾದ ಬ್ರಹ್ಮನು ಬ್ರಹ್ಮಾಂಡಗಳ ಸೃಷ್ಟಿಗಾಗಿ ತಪಸ್ಸು ಮಾಡತೊಡಗಿದನು ನಿರಂತರ ತಪಸ್ಸಿನಿಂದ ಸಂಪ್ರೀತನಾದ, ಸಕಲ ಶಕ್ತಿಗಳಿಗೂ ಆದಾರನಾದ ಪರಮಾತ್ಮನು 'ತಪ' ಎನ್ನುವುದರ ಮೂಲವಾದ 'ಸನ' ಎನ್ನುವ ಹೆಸರನ್ನು ಪಡೆದು ಬ್ರಹ್ಮಮಾನಸ ಪುತ್ರರಾಗಿ ಜನಿಸಿದನು ಇವರು ಸದಾಕಾಲದಲ್ಲೂ ಐದು ವರ್ಷದ ಕೌಮಾರಾವಸ್ಥೆಯಲ್ಲಿಯೇ ಇದ್ದುಕೊಂಡು ಜ್ಞಾನ ಸಂಪನ್ನ, ವಿದ್ಯಾ ಸಂಪನ್ನರಾದರು ಸನಕ, ಸನಂದನ, ಸನಾತನ (ಸನಸ್ಸುಜಾತ), ಸನತ್ಕುಮಾರ -- ಎನ್ನುವ ಈ ನಾಲ್ವರು ಮಹಾತಪಸ್ವಿಗಳಾಗಿದ್ದುದರಿಂದ ಯೋಗಿಗಳೂ, ಸಾಂಖ್ಯ ತತ್ವದ ಪ್ರತಿಪಾದಕರೂ, ದರ್ಮಶಾಸ್ತ್ರದ ಆಚಾರ್ಯರೂ ಆಗಿ, ಪ್ರಾಪಂಚಿಕ ಬಂಧ ಮುಕ್ತಿಯ ತತ್ವವನ್ನು ಸಂಸ್ಥಾಪಿಸಿದರು ಇವರು ಶ್ರೀಮದ್ಭಾಗವತವನ್ನು ನಾರದನಿಗೆ ಉಪದೇಶಿಸಿದರು ಬ್ರಹ್ಮವಿದ್ಯೆಯ ತತ್ವವನ್ನೂ ಪ್ರತಿಪಾದಿಸಿದರು

## ೧೨. ನರ -- ನಾರಾಯಣ :

ಸೃಷ್ಟಿಯ ಆದಿಯಲ್ಲಿ ಸ್ವತಃ ವಾಸುದೇವನೇ ದರ್ಮದ ರೂಪದಲ್ಲಿ ಸಹಯೋಗ ಹೊಂದುವುದಕ್ಕಾಗಿ ಎರಡು ರೂಪಗಳಲ್ಲಿ ವ್ಯಕ್ತವಾದನು ಅವರು ದಪ್ಪವಾಗಿ ಜಡಗಟ್ಟಿದ ಕೇಶರಾಶಿಯನ್ನು ಶಿರದಲ್ಲಿ ಹೊಂದಿದ್ದು, ಕೈಗಳಲ್ಲಿ ಹಂಸ ಚಿಹ್ನೆಗಳನ್ನು, ಕಾಲುಗಳಲ್ಲಿ ಚಕ್ರ ಚಿಹ್ನೆಗಳನ್ನೂ, ಎದೆಯ ಮೇಲೆ ಶ್ರೀವತ್ಸ ಚಿಹ್ನೆಗಳನ್ನೂ ಹೊಂದಿದ್ದರು ಇವರ ಬಾಹುಗಳು ದೀರ್ಘವಾಗಿದ್ದು, ಗುಡುಗಿನ ತರಹ ಕಂಠಧ್ವನಿಗಳನ್ನು ಹೊಂದಿದ್ದರು ಬಿಲ್ಲಿನಾಕಾರದ ಸುಂದರ ಕಣ್ಣು ಹುಬ್ಬುಗಳು, ಮೊನೆಚಾದ ಕೆನ್ನೆಗಳು, ನಾಸಿಕಗಳಿಂದ

ದಳಧಳನೆ ಕಂಗೊಳಿಸುತ್ತಿದ್ದರು ತಾಪಸಿಗಳು ವೇಷ ಭೂಷಣಗಳನ್ನು ಹೊಂದಿದ್ದರು ಒಂದೇ ರೀತಿಯ ಬುದ್ಧಿ ಮತ್ತತೆ, ಸ್ವಬಾವ, ರೂಪ, ನಡಿಗೆಗಳನ್ನು ಹೊಂದಿದ್ದು ನರ - ನಾರಾಯಣ ಎಂಬ ಹೆಸರನ್ನು ಪಡೆದಿದ್ದರು

ಇವರು ಧರ್ಮ ಹಾಗೂ ದಕ್ಷನ ಮಗಳಾದ ಮೂರ್ತಿಯಲ್ಲಿ ಜನಿಸಿದವರಾಗಿದ್ದು, ಬದರಿಕಾಶ್ರಮದ ಬದರಿನಾರಾಯಣನಲ್ಲಿ ಗಾಢವಾದ ತಪಸ್ಸು ಮಾಡಿದವರು, ಸ್ವರ್ಗದ ಅಪ್ಸರೆಯರೂ ಕೂಡ ಇವರನ್ನು ಸಮ್ಮೋಹನಗೊಳಿಸಲಾಗಲಿಲ್ಲ

## ೧೩. ಕಪಿಲ :

ಸ್ವಯಂಬು ಮನ್ವಂತರದ ಮೊದಲನೇ ಪಾದ ಕಲ್ಪ ಚತುರ್ಮುಖ ಬ್ರಹ್ಮನು ಸೃಷ್ಟಿ ಕಾರ್ಯವನ್ನು ಮುಂದುವರೆಸುತ್ತಾ ಸ್ವಾಯಂಭು ಮನುವ ಶತರೂಪಾಳನ್ನು ವಿವಾಹವಾಗುವಂತ ಆಜ್ಞಾಪಿಸಿದನು ಅಂತೆಯೇ ವಿವಾಹವಾಯಿತು ಅವರಿಗೆ ದೇವಹೂತಿ ಜನಿಸಿದಳು ಇವಳನ್ನು ವಿವಾಹವಾಗುವಂತೆ ಬ್ರಹ್ಮ ಮಾನಸ ಪುತ್ರನಾದ ಕರ್ದಮನಿಗೆ ಬ್ರಹ್ಮನ ಆಜ್ಞೆಯಾಯಿತು ಅಂತೆಯೇ ವಿವಾಹವಾದ ಈ ಕರ್ದಮಮುನಿ ಹಾಗೂ ದೇವಹೂತಿಯರಲ್ಲಿ ಜನಿಸಿದವನೇ ಕಪಿಲ ಮಹರ್ಷಿ ಕರ್ದಮನ ಅಪಾರ ತಪಸ್ಸಿನ ಫಲವಾಗಿ ಶ್ರೀಹರಿಯು ಕಪಿಲ ರೂಪದಲ್ಲಿ ಜನಿಸಿ, ಪ್ರಪಂಚದಲ್ಲಿ ಸಾಂಖ್ಯ ತತ್ವವನ್ನು ಪರಡಿದ ಎಲ್ಲರಿಗಿಂತ ಮುಂಚೆ ಸ್ವತಃ ತನ್ನ ತಾಯಿಗೇ ಈ ತತ್ವವನ್ನು ಭಗವಾನ್ ಕಪಿಲನು ಬೋಧಿಸಿದನು ಅರುಂದತಿ ಇತ್ಯಾದಿ ಒಂಬತ್ತು ಮಂದಿ ಈತನ ಸಹೋದರಿಯರು ಸಿದ್ಧರಿಗೆ ಈತನು ನಾಯಕನೂ ಹೌದು ಈತನು ಪ್ರಪಂಚದ





ಲ್ಲೆಲ್ಲ ಸುತ್ತಾಡಿ ಜನರಲ್ಲಿ ಹರಡಿದ್ದ ಅಜ್ಞಾನ ಹಾಗೂ ತಪ್ಪು ಗ್ರಹಿಕೆಗಳನ್ನು ದೂರಮಾಡಿ ತಾತ್ವಿಕ ಜ್ಞಾನ, ಅರಿವು, ಸಾದನೆಗಳ ಕಾರಣತ್ವವನ್ನು ಪ್ರಚುರಪಡಿಸಿದನು ಈ ರೀತಿಯ ಬ್ರಹ್ಮವಿದ್ಯೆಯ ಮೂಲಕಾರಣ ಬಗವಾನ್ ಕಪಿಲನೇ ಆಗಿರುವನು

## ೧೪. ದತ್ತಾತ್ರೇಯ :

ಈಗ ನಡೆಯುತ್ತಿರುವ ವೈವಸ್ವತ (ಸ್ವಾಯಂಭುವ ಎಂದೂ ಹೇಳಲಾಗುತ್ತದೆ) ಮನ್ವಂತರದಲ್ಲಿ ಅತ್ರಿಮುನಿಯು ಸಂತಾನಾರ್ಥವಾಗಿ ತಪಸ್ಸು ಮಾಡಿದ ಆತನ ತಪಸ್ಸಿಗೆ ತ್ರಿಮೂರ್ತಿಗಳೂ ಪ್ರಸನ್ನರಾದರು ಅವರು ತಮ್ಮ ಒಬ್ಬೊಬ್ಬರ ಅಂಶದಿಂದ ಒಬ್ಬೊಬ್ಬ ಮಗ ಹುಟ್ಟುವಂತೆ ಅನುಗ್ರಹಿಸಿದರು ಅಂತೆಯೇ ಬ್ರಹ್ಮನ ಅಂಶದಿಂದ ಚಂದ್ರನೂ, ವಿಷ್ಣುವಿನ ಅಂಶದಿಂದ ದತ್ತಾತ್ರೇಯನೂ, ಶಿವನ ಅಂಶದಿಂದ ದೂರ್ವಾಸ ಮುನಿಯೂ ಜನಿಸಿದರು ಅತ್ರಿ ಮುನಿಯ ಪತ್ನಿಯಾದ ಅನಸೂಯೆಯೂ ಓರ್ವ ಮಹಾ ಪತಿವ್ರತೆಯಾದುದರಿಂದ ತ್ರಿಮೂರ್ತಿಗಳು ವಿಶೇಷ ಅನುಗ್ರಹ ತೋರಿ ದತ್ತಾತ್ರೇಯನಲ್ಲಿ ತಮ್ಮ ಮೂರು ಅಂಶಗಳನ್ನೂ ಸೇರಿಸಿವರು ಹೀಗಾಗಿ ಈತನು ತ್ರಿಮೂರ್ತಿಗಳ ಅವತಾರ ಎಂದೂ ನಂಬಲಾಗಿದೆ ಈ ಅವತಾರಕ್ಕೆ ಕಾಲಾವಧಿ ಇಲ್ಲದೇ ಇರುವುದರಿಂದ ಈತನನ್ನು 'ಅವಿನಾಶಿ' ಎಂದೂ, ಸಿದ್ಧರ ಯೋಗ ಶಕ್ತಿಯಿಂದ ದೇವ ದೇವತೆಗಳನ್ನು ರಕ್ಷಿಸಿದುದರಿಂದ 'ದೇವದೇವೇಶ್ವರ' ನೆಂದೂ ಕರೆಯಲಾಗುತ್ತದೆ

## ೧೫. ಯಜ್ಞ :

ಸ್ವಯಂಭೂ ಮನ್ವಂತರದಲ್ಲಿ ಆ ಮನುವಿನ ಮೂವರು ಪುತ್ರಿಯರಲ್ಲಿ ಆಕೂತಿ ಎನ್ನುವವಳು ಹಿರಿಯಳು ಇವಳ ತಾಯಿಯೇ ಶತರೂಪಾಳು ಈ ಅಕೂತಿಯು ರುಚಿ ಎನ್ನುವ ಬ್ರಹ್ಮ (ಪ್ರಜಾಪತಿ) ನನ್ನು ಮದುವೆ ಯಾದಳು ಈ ಆಕೂತಿಯಲ್ಲಿ ಆದಿಪುರುಷ ಶ್ರೀ ಭಗವಾನನು ಯಜ್ಞ ಎನ್ನುವ ಹೆಸರಿನಿಂದ ಅವತರಿಸಿದನು ಈ ಯಜ್ಞ ಪುರುಷನೇ ಯಜ್ಞಕಾರ್ಯ ನಡೆಸುವವನಾಗುತ್ತಾನೆ ಅದರ ಪ್ರತಿನಿಧಿಯಾಗುತ್ತಾನೆ ಈತನ ಹೆಸರಿನಲ್ಲೆ ಯಜ್ಞಗಳು ನಡೆಯಲು ಪ್ರಾರಂಭವಾಮುವು ಈತನ ಮುಖಾಂತರ ದೇವತೆಗಳು ತಮ್ಮ ಶಕ್ತಿಯನ್ನು ಅಬಿವೃದ್ಧಿ ಪಡಿಸಿಕೊಂಡದ್ದೇ ಅಲ್ಲದೆ, ಸೃಷ್ಟಿಯೆಲ್ಲವೂ ಶಕ್ತಿಯುತವಾಯಿತು ಈತನು ತ್ರಿಲೋಕದ ಭಯಗಳನ್ನು ದೂರ ಮಾಡಿದುದೇ ಅಲ್ಲದೆ ಯಾಮದೇವರುಗಳ ಸೃಷ್ಟಿಗೂ ಕಾರಣನಾದನು ಇವರುಗಳೇ ದಿವ್ಯ ಮೊದಲನೇ ಯಾಮ, ಎರಡನೇ ಯಾಮಗಳಾಗಿ ಪರಿವರ್ತಿತರಾದರು ಹಾಗೂ ಸೂರ್ಯನ ಅವಿಭಾಜ್ಯ ಅಂಗವೂ ಆದರು

## ೧೬. ಋಷಭದೇವ :

ಪ್ರಾಯವ್ರತ ಮಹಾರಾಜನ ಪುತ್ರನಾದ ಆಗ್ನೀಧ್ರನು ವಿಪ್ರಚಿತ್ತಿ ಎಂಬ ಅಪ್ಸರೆಯನ್ನು ಪ್ರೀತಿಸಿ, ವಿವಾಹವಾದ ಇವರಿಗೆ ಒಂಭತ್ತು ಮಂದಿ ಮಕ್ಕಳಾದರು ಇವರಲ್ಲಿ ನಾಬಿಯೇ ಹಿರಿಯನು ಇವನು ತನ್ನ ಅಪ್ರತಿಮ ಪರಾಕ್ರಮ, ಸಾಹಸಗಳಿಂದ ಚಕ್ರವರ್ತಿಯಾದನು ಇವನು ಮೇರು ಪರ್ವತದ ಪುತ್ರಿಯಾದ ಮೇರು ದೇವಿಯನ್ನು ಮದುವೆಯಾದ ಈ ಮೇರು ದೇವಿಗೆ ಸುದೇವಿ ಎನ್ನುವ ಮತ್ತೊಂದು ಹೆಸರೂ ಇತ್ತು ಇವರಿಗೆ ಬಹಳ ದಿನಗಳ ವರೆಗೆ ಮಕ್ಕ





ಳಾಗಲಿಲ್ಲ ಇದಕ್ಕಾಗಿ ಯಜ್ಞಪುರುಷನನ್ನು ಆರಾಧಿಸಿ, ಶ್ರೀವಿಷ್ಣುವನ್ನು ಕುರಿತು ತಪಸ್ಸು ಮಾಡಿದರು ಅವರ ತಪಸ್ಸಿಗೆ ಮೆಚ್ಚಿದ ಮಹಾವಿಷ್ಣುವು ಸ್ವತಃ ಅವರಿಗೆ ಮಗನಾಗಿ ಜನಿಸಿದನು ಈ ಮಗುವು ವಜ್ರ, ಅಂಕುಶ ಚಿಹ್ನೆಗಳಿಂದ ಅತ್ಯಂತ ಸುಂದರನೂ, ಆಕರ್ಷಕ ಅಂಗಸೌಷ್ಠವಗಳಿಂದ ಕೂಡಿದ್ದು ಧೈರ್ಯ, ಸಾಹಸ, ವೈಭವಗಳನ್ನೂ ಹೊಂದಿದ್ದುದರಿಂದ ನಾಬಿಚಕ್ರವರ್ತಿಯು ತನ್ನ ಮಗನಿಗೆ ಋಷಭ (ಅತ್ಯಂತ ಸುಂದರ) ಎಂಬ ಹೆಸರನ್ನಿಟ್ಟನು ಈ ನಾಭಿಯು ಕಾಪಾಡಿದ ಭೂಬಾಗಕ್ಕೆ 'ಅಜನಾಬ' ಅದವಾ ಭಾರತವರ್ಷ ಎಬ ಹೆಸರು ಬಂದಿತು

## ೧೭. ವೃಥು :

ಸ್ವಾಯಂಭುವ ಮನುವಿನ ವಂಶಕ್ಕೆ ಸೇರಿದ ಊರು ಎಂಬ ರಾಜನ ಮಗನೇ 'ಅಂಗ' ಮೃತ್ಯುವಿನ ಮಗಳಾದ ಸುನೀದೆಯು ರಂಭೆಯ ಮೂಲಕ ಸಂಮೋಹಿನೀ ವಿದ್ಯೆಯನ್ನು ಪಡೆದು ಅಂಗರಾಜನನ್ನು ಮದುವಯಾದವಳು ಅಂಗನು ದೇವ, ಬ್ರಾಹ್ಮಣರಲ್ಲಿ ಭಕ್ತಿಯನ್ನು ಹೊಂದಿದ್ದು ಭಕ್ತಿ ಸಂಪನ್ನನೆನಿಸಿ ರಾಜಭಾರ ಮಾಡುತ್ತಿದ್ದ ಇದರಿಂದ ಇವನಿಗೆ ಪ್ರಜಾಪತಿ ಪಟ್ಟವೂ ಲಭಿಸಿತು ಇವನು ರಾಜ್ಯಬಾರ ಮಾಡಿದ ದೇಶವೇ ಅಂಗದೇಶ

ಇವರ ಮಗನೇ ವೇನ ಇವನು ನಾಸ್ತಿಕನಾಗಿದ್ದು, ತನ್ನ ತಾಯಿಯ ತಂದೆ ಮೃತ್ಯುವಿನಂತೆ ಅನೇಕ ದುರ್ಗುಣಗಳನ್ನು ಹೊಂದಿದ್ದು, ದುರಹಂಕಾರಿಯೂ, ಅನ್ಯಾಯಿಯೂ, ಅತ್ಯಾಚಾರಿಯೂ ಆಗಿದ್ದನು ದುರ್ಮಾರ್ಗಿಯಾದ ಇವನು ಪ್ರಜಾಪೀಡಕನೂ ಆಗಿದ್ದನು

ತಂದೆಯ ಮರಣಾನಂತರ ವೇನನನ್ನು ಮಹರ್ಷಿಗಳು ರಾಜನನ್ನಾಗಿ ಪಟ್ಟಾಭಿಷೇಕ ಮಾಡಿದರು ಇವನು ರಾಜನಾದ ಕೂಡಲೇ "ನಾನೇ ಯಜ್ಞಪುರುಷ ಅದರಿಂದ ಯಜ್ಞೇಶ್ವರನಿಗೆ ಅರ್ಪಿಸುವ ಎಲ್ಲ ವಸ್ತುಗಳೂ ನನಗೇ ಸೇರಬೇಕು!" ಎಂದು ಹೇಳಿದ ಈ ಬಗವದ್ದ್ರೋಹದ ಮಾತುಗಳನ್ನು ಆಲಿಸಿದ ಕೂಡಲೇ ಮಹರ್ಷಿಗಳು "ಕೊಲ್ಲಿರಿ! ಈ ಪಾಪಿ ದೊರೆಯನ್ನು! " ಎಂದವರೇ ಮಂತ್ರೋಕ್ತವಾದ ಕುಶದಿಂದ ಅವನನ್ನು ಕೊಂದರು

ಆದರೆ ರಾಜನಿಲ್ಲದ ರಾಜ್ಯವು ಅನಾಯಕವಾಯಿತು ಸುನೀದೆಯು ಮಗನ ಮೃತದೇಹವನ್ನು ಕಾಪಾಡಿದ್ದಳು ದೇಶದ ಅಸಹಾಯ ಸ್ಥಿತಿಯಿಂದ ದೂರವಾಗಲು ಋಷಿಗಳು ವೇನರಾಜನ ಶರೀರವನ್ನು ಮದನ ಮಾಡಿ ಪೃದುವನ್ನು ಸೃಷ್ಟಿಸಿದರು ಪೃದನು ಪ್ರಜೆಗಳ ಕಷ್ಟವನ್ನು ಕಂಡು ಮರುಗಿದ ಅವನ ತಂದೆಯ ಕಾಲದಲ್ಲಿ ನಾಸ್ತಿಕನಾಗಿದ್ದುದರಿಂದ ಭೂಮಿಯಲ್ಲಿ ಬೆಳೆಯಾಗದೆ ಬಿತ್ತಿದ ಬೀಜಗಳನ್ನೆಲ್ಲ ಬೂಮಿಯೇ ನುಂಗಿತ್ತು ಇದರಿಂದ ಪೃದುವು ಭೂಮಿಯನ್ನು ನಿಗ್ರಹಿಸಿ, ಅದುವರೆವಿಗೂ ನುಂಗಿದ್ದ ವಸ್ತುಗಳನ್ನೆಲ್ಲ ಕೊಡಿಸಿ, ಪ್ರಜೆಗಳಿಗೆ ಸುಖವನ್ನು ಉಂಟುಮಾಡಿದನು ಈ ಕಾರಣದಿಂದ ಬೂಮಿಗೆ ಇವನ ಹೆಸರೇ ಬಂದು ಪೃದಿವೀ (ಪೃದುರಾಜನ ಮಗಳು) ಎಂಬ ಹೆಸರು ಬಂದಿತು ಈತನಲ್ಲಿ ಸಕಲ ಕಲೆಗಳೂ ಕೂಡಿದ್ದು ಪ್ರಪಂಚದ ಮೊಟ್ಟಮೊದಲ ಚಕ್ರವರ್ತಿಯಾಗಿ ಬೆಳಗಿದನು ಈತನ ಪತ್ನಿ ಅರ್ಚಿಯು ಸಾಕ್ಷಾತ್ ಲಕ್ಷ್ಮೀದೇವಿಯ ಅಪರಾವತಾರವಾಗಿದ್ದಳು

## ೧೮. ಹಯಗ್ರೀವ :

ಒಮ್ಮೆ ಮಹಾವಿಷ್ಣುವು ಲಕ್ಷ್ಮಿಯೊಂದಿಗೆ ಕ್ರೀಡಿಸುತ್ತಾ ಆಕೆಯನ್ನು ನೋಡಿ ನಕ್ಕ ತನ್ನ ಸೌಂದರ್ಯದ ಬಗ್ಗೆ ಅವಹೇಳನ ಮಾಡುವುದಕ್ಕಾಗಿ ಆತ ನಕ್ಕನೆಂದು ಭಾವಿಸಿದ ಲಕ್ಷ್ಮಿಯು ಆತನ ತಲೆಯು ಉರುಳಿಬೀಳುವಂತೆ ಶಾಪವಿತ್ತಳು ಸ್ವಲ್ಪ ಸಮಯದ ನಂತರ ಒಮ್ಮೆ ವಿಷ್ಣುವು ಆದಿಶೇಷನ ಮೇಲೆ ಮಲಗಿ, ತನ್ನ ಶಾರ್ಙ್ಗಕವೆಂಬ ಬಿಲ್ಲನ್ನೆ ತಲೆ ದಿಂಬಾಗಿ ಇಟ್ಟುಕೊಂಡು ನಿದ್ರಿಸುತ್ತಿದ್ದ ಆಗ ಮದುಕೈಟಭರು ವಿಷ್ಣುವಿನಲ್ಲಿಗೆ ಬಂದು ಆತ ನಿದ್ರಿಸುತ್ತಿದ್ದುದನ್ನು ಕಂಡು, ಗೆದ್ದಲನ್ನು ಸೃಷ್ಟಿ ಮಾಡಿ, ವಿಷ್ಣುವಿನ ಧನುಸ್ಸಿನ ಬುಡವನ್ನು ಕತ್ತರಿಸ ಹೇಳಿದರು ಅಂತೆಯೇ ಗೆದ್ದಲು ಬಿಲ್ಲಿನ ಬುಡವನ್ನು ತಿಂದಿತು ಇದರಿಂದ ಬಿಗಿದಿದ್ದ ಬಿಲ್ಲಿನ ಹೆದೆ ಸಡಿಲವಾಯಿತು ಕೂಡಲೇ ಬಿಲ್ಲಿನ ತುದಿ ಹಾರಿ ವಿಷ್ಣುವಿನ ಕೊರಳನ್ನೂ ಹಾರಿಸಿತು ಆಗ ದೇವತೆಗಳೆಲ್ಲರೂ ಒಂದು ಕುದುರೆಯ ರುಂಡವನ್ನು ವಿಷ್ಣುವಿನ ಮುಂಡಕ್ಕೆ ಸೇರಿಸಿದರು ಈ ರೀತಿಯಲ್ಲಿ ವಿಷ್ಣುವು ಹಯಗ್ರೀವನಾದ

ಒಮ್ಮೆ ಬ್ರಹ್ಮನು ಸೃಷ್ಟಿ ಕಾರ್ಯದಲ್ಲಿ ನಿರತನಾಗಿದ್ದಾಗ ಮದುಕೈಟಬ ರಾಕ್ಷಸರು ಮೆಲ್ಲನೆ ಆತನ ಬಳಿಗೆ ಬಂದು, ಆತನ ಬಳಿ ಇದ್ದ ವೇದಗಳನ್ನು ಕದ್ದು, ರಸಾತಲವನ್ನು ತಲುಪಿದರು ಆಗ ಅವನ್ನು ರಕ್ಷಿಸಿ, ಹಿಂತಿರುಗಿಸುವಂತೆ ಶ್ರೀಮನ್ನಾರಾಯಣನನ್ನು ಆತ ಮನಸ್ಸಿನಲ್ಲಿಯೇ ಪ್ರಾರ್ದಿಸಿದ ಹಿರಣ್ಯಗರ್ಬನ ಈ ಪ್ರಾರ್ದನೆಯನ್ನು ಆಲಿಸಿದ ಮಹಾವಿಷ್ಣುವು ನಿದ್ರೆಯಿಂದ ಎಚ್ಚೆತ್ತು, ಈಗಾಗಲೇ ನೀಡಲ್ಪಟ್ಟಂತ ಹಯಗ್ರೀವ ಅವತಾರವನ್ನು ಪಡೆದು ಅವರನ್ನು ಕೊಂದು ವೇದಗಳನ್ನು ತಂದುಕೊಟ್ಟ.

ಈತನು ವೈದಿಕ ಯಜ್ಞದ ಸಮಯದಲ್ಲಿ ಆವಿರ್ಭವಿಸಿದನೆಂದೂ ಹೇಳುತ್ತಾರೆ

## ೧೯. ಹರಿ :

ಗಜೇಂದ್ರನು ಆನೆಯಿಂದ ಸೆಳೆಯಲ್ಪಟ್ಟು ಪ್ರಾಣಾಪಾಯದಲ್ಲಿ ಇದ್ದಾಗ ಆತನ ಪ್ರಾರ್ದನೆಯಂತೆ ಆತನನ್ನು ರಕ್ಷಿಸಲು ಶ್ರೀ ಮಹಾವಿಷ್ಣುವು ಶ್ರೀ ಹರಿಯ ರೂಪವ ನ್ನು ಪಡೆದು, ಮೊಸಳೆಯನ್ನು ಸಂಹರಿಸಿ, ಗಜೇಂದ್ರನನ್ನು ರಕ್ಷಿಸಿದನು

## ೨೦. ವ್ಯಾಸ :

ಶ್ರೀಮನ್ನಾರಾಯಣನ ಕಲಾವತಾರದ ಶಕ್ತಿಯ ಅಂಶವಾಗಿ ವ್ಯಾಸನು ಜನಿಸಿದನು ಈತನು ಅಮಾನುಷ, ಅತ್ಯದ್ಭುತ ಶಕ್ತಿಗಳನ್ನು ಹೊಂದಿದ್ದನು



ಪರಾಶರ ಮಹರ್ಷಿಯ ಮಗನಾಗಿ ಸತ್ಯವತಿಯಲ್ಲಿ ಯಮುನೆಯ ದ್ವೀಪವೊಂದರಲ್ಲಿ ಈತ ಜನಿಸಿದನು ಆದುದರಿಂದ ಈತ ಪಾರಾಶರ್ಯ ಎಂಬುದಾಗಿಯೂ, ದ್ವೈಪಾಯನನು ಎಂಬುದಾಗಿಯೂ ಕರೆಯಲ್ಪಟ್ಟನು ಈತನ ಮೈ ಬಣ್ಣವು ಅಚ್ಚ ಕಪ್ಪು ಆಗಿದ್ದುದರಿಂದ ಈತನಿಗೆ ಕೃಷ್ಣದ್ವೈಪಾಯನ ಎನ್ನುವ ಹೆಸರು ಬಂದಿತು ಈತನು ಬದರಿಯ ಅರಣ್ಯಗಳಲ್ಲಿ ಇರುತ್ತಿದ್ದುದರಿಂದ ಈತನಿಗೆ 'ಬಾದರಾಯಣ' ಎನ್ನುವ ಹೆಸರೂ ಬಂದಿತು ಈತನ ಅವತಾರವಾಗುತ್ತಿದ್ದಂತೆಯೆ ವೇದ ವೇದಾಂಗಗಳು ಹಾಗೂ ಇತಿಹಾಸದ ಜ್ಞಾನವನ್ನು ಪಡೆದ ಈತನು ಮಹಾಭಾರತದ ರಚನೆ ಮಾಡಿದ ವೇದಗಳನ್ನು ಸಂಶೋದಿಸಿ ಅವುಗಳನ್ನು ನಾಲ್ಕು ಬಾಗಗಳನ್ನಾಗಿ ಮಾಡಿದ ಅದರಿಂದಲೇ ಈತನನ್ನು ವೇದವ್ಯಾಸ ಎಂದು ಕರೆದರು ಈತನು ಸಂಜಯನಿಗೆ ಜ್ಞಾನ ದೃಷ್ಟಿಯನ್ನು ನೀಡಿ, ಸಂಜಯನು, ಶ್ರೀಕೃಷ್ಣನು ಅರ್ಜುನನಿಗೆ ನೀಡಿದ ವಿಶ್ವರೂಪ ದರ್ಶನದ ಪ್ರತ್ಯಕ್ಷತೆಯನ್ನು ತೋರಿಸಿದ ಅಂತೆಯೇ ಈತನು ಹದಿನೆಂಟು ಪುರಾಣಗಳನ್ನು ರಚಿಸಿದ

## ೨೧. ಹಂಸ :

ಒಮ್ಮೆ ಪಿತಾಮಹ ಬ್ರಹ್ಮನ ಬಳಿಗೆ ಸನತ್ಕುಮಾರ, ಸನಕ ಆದಿಕುಮಾರರು ಬಂದು ಚಿತ್ತ, ಗುಣ, ನಿರ್ವಿಷಯ -- ಇವುಗಳ ಬಗೆಗೆ ಕೆಲವೊಂದು ಮುಖ್ಯವಾದ ತಾತ್ವಿಕ ಪ್ರಶ್ನೆಗಳನ್ನು ಕೇಳಿದರು ಬ್ರಹ್ಮನು ಈ ಪ್ರಶ್ನೆಗಳಿಗೆ ನೇರವಾಗಿ ಉತ್ತರ ಕೊಡಲಾಗದೆ ಆದಿಪುರುಷ ಭಗವಾನ್ ವಿಷ್ಣುವನ್ನು ಸ್ಮರಿಸಿದನು ಕೂಡಲೇ ಅವರೆಲ್ಲರ ಎದುರುಗಡೆ ಬಗವಾನನು ಹಂಸರೂಪವನ್ನು ಧರಿಸಿ ಪ್ರತ್ಯಕ್ಷನಾದನು ಕೂಡಲೇ ಆತನಿಗೆ ಅಲ್ಲಿ ನೆರೆದಿದ್ದ ದೇವಾದಿ ದೇವತೆಗಳೆಲ್ಲ ಅರ್ಘ್ಯ ಪಾದ್ಯಗಳನ್ನಿತ್ತು ಆದರಿಸಿ, ಆಸನವನ್ನಿತ್ತು, ಸನಕ ಸನಂದಾದಿಗಳ ಸಮಸ್ಯೆಗಳನ್ನು ಎದುರುಗಡೆ ಇಟ್ಟರು ಆಗ ಹಂಸನು ಅವರೆಲ್ಲರಿಗೂ ಭಕ್ತಿ ಯೋಗ, ಜ್ಞಾನಯೋಗಗಳನ್ನು ವಿವರಿಸಿ, ಭಾಗವತ ಪುರಾಣವನ್ನು ತಿಳಿಸಿದನು ಇದನ್ನೇ ಮುಂದೆ ನಾರದ ಮಹರ್ಷಿಗೂ ಈತನೇ ಸವಿವರವಾಗಿ ದೋಧಿಸಿದನು ಶ್ರೀಮದ್ಭಾಗವತದ ಮೊದಲ ಒಂಭತ್ತು ಸಂಧಿಗಳಲ್ಲಿ ಇವೆಲ್ಲದರ ಸಂಗ್ರಹ ರೂಪ ಕಾಣಿಸಿಕೊಂಡಿದೆ

## ೨೨. ಧನ್ವಂತ್ರಿ :

ದೇವದಾನವರು ಕ್ಷೀರಸಮುದ್ರವನ್ನು ಮಥನ ಮಾಡಿದಾಗ, ಕ್ಷೀರಸಮುದ್ರದಿಂದ ಈತ ಜನಿಸಿದ. ಈತನು ದೇವತೆಗಳ ವೈದ್ಯ ಪ್ರಪಂಚದಲ್ಲಿ ಆಯುರ್ವೇದವನ್ನು ಪ್ರಚಾರಕ್ಕೆ ತಂದವ ಸಮಸ್ತ ಪ್ರಾಣಿಗಳ ಉತ್ತಮ ಆರೋಗ್ಯವನ್ನು ಸಂಸ್ಥಾಪಿಸುವ ಹಾಗೂ ವೃದ್ಧಾಪ್ಯ ಮತ್ತು ರೋಗರುಜಿನಗಳಿಂದ ಉಂಟಾಗುವ ದುಃಖ, ನೋವುಗಳನ್ನು ನಿರ್ಮೂಲ ಮಾಡುವುದಕ್ಕಾಗಿ ಸ್ವತಃ ಭಗವಾನ್ ವಿಷ್ಣುವೇ ಧನ್ವಂತ್ರಿಯ ರೂಪವನ್ನು ಪಡೆದ ಈತನು ಕಾರ್ತೀಕ ಮಾಸದ ಕೃಷ್ಣಪಕ್ಷದ ತ್ರಯೋದಶಿಯಂದು ಅವತರಿಸಿದುದರಿಂದ ಆಯುರ್ವೇದ ಪ್ರೇಮಿಗಳೆಲ್ಲ ಬಗವಾನ್ ಧನ್ವಂತ್ರಿಯ ಜನ್ಮದಿನವನ್ನು ಅಂದು ಆಚರಿಸಿ, ಆತನನ್ನು ಆರೋಗ್ಯ ದೇವತೆಯನ್ನಾಗಿ ಪೂಜಿಸುವರು ಅಂತೆಯೇ ಈತನು ಕ್ಷೀರಸಾಗರದ ಮಥನದ ಕಾಲದಲ್ಲಿ ಅಮೃತಕಳಶವನ್ನು ಹಿಡಿದು ಹೊರ ಬಂದವನು

## ೨೩. ಮೋಹಿನಿ :

ಕ್ಷೀರಸಾಗರ ಮಥನದಿಂದ ಹೊರಬಂದ ಉತ್ತಮ ವಸ್ತುಗಳಲ್ಲಿ ಅಮೃತದಿಂದ ಕೂಡಿದ ಕಳಶವೂ ಒಂದು ಇದಕ್ಕಾಗಿ ದೇವ, ದಾನವರ ನಡುವೆ ಹೋರಾಟ ನಡೆದು, ಧನ್ವಂತರಿಯ ಕೈನಿಂದ ಅಮೃತಕಳಶವನ್ನು ಅಸುರರು ಕಸಿದುಕೊಂಡು ಓಡಿ ಹೋದರು ಆಗ ದೇವತೆಗಳು ನಿಸ್ಸಹಾಯಕರಾಗಿ ನೋಡುತ್ತಿದ್ದರು ಅಸುರರಲ್ಲೆ ಮತ್ತೆ ಅಮೃತದ ಹಂಚಿಕೆಗಾಗಿ ಅಂತರ್ಜಗಳ ಪ್ರಾರಂಭವಾಯಿತು ಆಗ ಭಗವಾನ್ ವಿಷ್ಣುವು ಬ್ರಹ್ಮಾಂಡದಲ್ಲೆ ಅತ್ಯಂತ ಸೌಂದರ್ಯವತಿಯೂ, ಯವ್ವನವತಿಯೂ ಆದ ಮೋಹಿನಿಯ ರೂಪವನ್ನು ಪಡೆದು, ತನ್ನ ಮರುಳುಗೊಳಿಸುವ ಆಕರ್ಷಣೆಯಿಂದ ದಾನವರ ಮೇಲೆ ಮೋಡಿ ಹಾಕಿ ದೇವದಾನವರ ನಡುವೆ ಹಂಚುವುದಕ್ಕಾಗಿ ಅಮೃತಕಳಶವನ್ನು ತನ್ನ ಕೈವಶಮಾಡಿಕೊಂಡನು ಆಕೆಯ ಮಾಂತ್ರಿಕ ಲಾವಣ್ಯಕ್ಕೆ ಮಾರುಹೋದ ದಾನವರು ಸ್ತಬ್ದರಾಗಿ ಕುಳಿತರು ಆಕೆಯು ಅಮೃತವೆಲ್ಲವನ್ನೂ ದೇವತೆಗಳಿಗೇ ಕುಡಿಸಿದಳು ಕೂಡಲೇ ವಿಷ್ಣುವು ತನ್ನ ನಿಜರೂಪವನ್ನು ಪಡೆದು, ಅಸುರನಾದ ರಾಹುವಿನ ತಲೆಯನ್ನು ಕತ್ತರಿಸಿದನು ಈ ರೀತಿಯಲ್ಲಿ ದೇವತೆಗಳಿಗೆ ಸಹಾಯ ಮಾಡುವುದಕ್ಕಾಗಿಯೇ ಮಹಾವಿಷ್ಣುವು ಮೋಹಿನಿಯ ರೂಪವನ್ನು ಪಡೆದ

ಈ ಅವತಾರದ ಮುಖ್ಯ ತತ್ವವೆಂದರೆ ಸಮಸ್ತ ಸೃಷ್ಟಿಯೂ ಪತಿಯಾದ ಪರಮಾತ್ಮನಿಂದ ನಿರ್ಮಿತವಾದ ಒಂದು ಮಾಯೆ ಎಲ್ಲ ಜೀವಿಗಳೂ ಕಾಮೋದ್ವೇಗದಿಂದ ಉತ್ತೇಜಿತರಾಗಿ ವಿಷ್ಣುವಿನ ಭ್ರಮಾರೂಪದಿಂದ ಮರುಳುಗೊಂಡು ಮುಗ್ಧರಾಗುವರು ಅಸುರನಂತಹವನ ಜೀವನದಲ್ಲಿ ಅಮರತ್ವ ನೀಡುವ ಅಮೃತವನ್ನು ಪಡೆಯುವುದು ಅಸಾಧ್ಯ ಪರಮಾತ್ಮನ ಪಾದಕಲದಲ್ಲಿ ಶರಣು ಹೋಗುವುದರಿಂದ ಮಾತ್ರವೇ ಅಮರತ್ವ ವಾಗೂ ಮೋಕ್ಷವ ಪಡಯಲು ಸಾಧ್ಯ

## ೨೪. ನಾರದ :

ಪವಿತ್ರ ಮುನಿಯಾದ ನಾರದನು ಭಗವಾನ್ ಮಹಾವಿಷ್ಣುವಿನ ಮಾನಸಿಕ ಅವತಾರ ಪಡೆದವನು ತನ್ನ ಕೈಗಳಲ್ಲಿ ವೀಣೆಯನ್ನು ದರಿಸಿ ಎಲ್ಲೆಲ್ಲೂ ಸುತ್ತಾಡಿ, ಎಲ್ಲ ವಿಷಯಗಳನ್ನೂ ತಿಳಿದಿರುವ ಈತನು ಪರಮಾತ್ಮನ ಇಚ್ಛೆಯ ಮೇರೆಗೆ ನಡೆಯುವವನು ಈತನು ನಾರದ ಪಾಂಚರಾತ್ರ ಎನ್ನುವ ಸಾತ್ವತ ತಂತ್ರವನ್ನು ದೋದಿಸಿದನು ಕರ್ಮಗಳಿಂದ ಪ್ರತಿಜೀವಿಯೂ ಕರ್ಮಬಂಧದಿಂದ ಹೇಗೆ ಮುಕ್ತಿ ಪಡೆಯುವುದು ಎಂಬುದನ್ನು ಈ ತತ್ವವು ದೋಧಿಸುತ್ತದೆ

(ಸಂಗ್ರಹ)



# ಮಾನವ ಮತ್ತು ತುಳಸಿ

ಡಾ. ಎನ್. ಜಿ. ರಘು ಮೋಹನ್

ಹಿಂದು ಸಮಾಜದಲ್ಲಿ ತುಳಸಿಗೆ ಒಂದು ಬಹುಮುಖ್ಯ ಸ್ಥಾನವಿದೆ ತಲೆತಲಾಂತರದಿಂದ ಹಿಂದೂ ಜನಾಂಗದ ಹಳೆಯ ಮನೆಗಳಲ್ಲಿ ಮನೆ ಮುಂದೆಯೋ ಅಥವಾ ಹಿಂದುಗಡೆಯೋ ತುಳಸೀ ಬೃಂದಾವನ ಇಟ್ಟಿಗೆಯಲ್ಲಿ ಕಟ್ಟಿರುವುದು ನೋಡಬಹುದು ಇದೀಗ ಮಾನವ ಸಣ್ಣ ಪುಟ್ಟ ಮನೆಗಳಿಗೆ ಬಂದು, ಮಾಳಿಗೆ ಮನೆಗಳಲ್ಲಿ ವಾಸಿಸಲು ಆರಂಬಿಸಿದಾಗಿನಿಂದ ತುಳಸಿ ಬೃಂದಾವನದ ಬದಲು, ಟಿ ವಿ ಆನ್ಟೆನಾ ಮಕ್ಕಳಿಗೆ ಹೆಚ್ಚಿನ ಪರಿಚಯ ತಂದಿದೆಯೇ ಹೊರತು ನಮ್ಮ ಹಳೇ ಪೀಳಿಗೆಯ ಬೃಂದಾವನಗಳು ಕಾಣಬರುತ್ತಿಲ್ಲ ಸಾಲದ್ದಕ್ಕ ಬೆಳೆಸಲು ಸ್ಥಳದ ಅಭಾವ, ಪೂಜೆಯ ಮತ್ತು ಪೂಜಿಸಲು ಸಮಯದ ಅಭಾವ ಹೀಗಾಗಿ ಹಿಂದಿನಂತೆ ಬೃಂದಾವನಗಳು ಇರುವ ಮನೆಗಳೇ ಕಡಿಮೆಯಾಗುತ್ತಿವೆ ಮತ್ತು ಕಣ್ಮರೆಯಾಗುತಿವೆ ಎಂದರೆ ಅತಿಶಯವಲ್ಲ

ವೈಜ್ಞಾನಿಕ ಮತ್ತು ಸಾಂಸ್ಕೃತಿಕ ದೃಷ್ಟಿಯಿಂದ ಒಮ್ಮೆ ನಾವು ತುಳಸಿಯ ವಿಷಯವನ್ನು ಅರಿತಾಗ ನಮಗೂ ಅರಿವಾಗುತ್ತದೆ ಏಕೆ ನಮ್ಮ ಹಿಂದಿನವರು ತುಳಸಿಗೆ ಇಷ್ಟು ಮುಖ್ಯಸ್ಥಾನ ಕೊಟ್ಟಿದ್ದರು ಮತ್ತು ಕೊಟ್ಟಿದ್ದಾರೆ ಎಂದು

ಪೌರಾಣಿಕ ದೃಷ್ಟಿಯಿಂದ ನೋಡಿದರೆ ಶ್ರೀ ಪುರಂದರ ದಾಸರು ತುಳಸಿಯನ್ನು ಹೀಗೆ ಕೊಡಾಡಿದ್ದಾರೆ

ಬೃಂದಾವನವೆ ಮಂದಿರವಾಗಿಹ
ಇಂದಿರೆ ಶ್ರೀ ತುಳಸಿ
ನಂದನಂದನ ಮುಕುಂದಗೆ
ಪ್ರಿಯಾಳಾದ ಇಂದಿರೇ ಶ್ರೀ ತುಳಸೀ ೧

ತುಳಸಿಯವನದಲಿ ಹರಿ ಇಹನೆಂಬುದ
ಶ್ರುತಿ ಸಾರುತಿದೆ ಕೇಳಿ
ತುಳಸಿ ದರುಷನದಿಂದ ದುರಿತಗಳೆಲ್ಲವೂ
ದೂರವಾಗುವುದು ಕೇಳಿ
ತುಳಸಿ ಸ್ಪರುಷನದಿಂದ ದೇಹ ಪಾವನವೆಂದು
ತಿಳಿದುದಿಲ್ಲದೇ ಪೇಳಿ
ತುಳಸಿ ಸ್ಮರಣೆ ಮಾಡಿ ಸಕಲೇಷ್ಟವ ಪಡೆದು
ಸುಖದಲಿ ನೀವು ಬಾಳೀ ಬೃಂದಾವನವೇ ೨

## ಸೃಷ್ಟಿ

ಮೂಲತಃ ದೇವತೆಗಳು ಮತ್ತು ದಾನವರು ಸಮುದ್ರಮದನ ಮಾಡುವಾಗ ದನ್ವಂತ್ರಿಯ ಉತ್ಪವವಾಗುತ್ತದ ಅವನು ಸಂತೋಷ ಚಿತ್ತದಿಂದ ಇರುವಾಗ ಕಣ್ಣಿನಿಂದ ಬಿದ್ದ ಆಶ್ರುಗಳೇ ಬೂಮಿಯ ಮೇಲೆ ತುಳಸಿಯಾಗುತ್ತದೆ ಅಂದಿನಿಂದಲೂ ತುಳಸಿಯನ್ನು ದೇವತೆಗಳು ಮಾನವರು ಪೂಜಿಸುತ್ತ ಬಂದಿದ್ದಾರೆ

ಶ್ರೀ ವಿಜಯ ದಾಸರು ತುಳಸಿಯನ್ನು ಶ್ರೀ ತುಳಸಿ ಮಹಿಮಾ ಸೋತ್ರದಲ್ಲಿ ಈ ರೀತಿಯಾಗಿ ಕೊಂಡಾಡಿದ್ದಾರೆ ತುಳಸಿಯ ಮೂಲದಲ್ಲಿ ಎಲ್ಲ ತೀರ್ದಗಳು, ಮದ್ಯೆ ಎಲ್ಲ ನದಿಗಳು ಮತ್ತು ದಳಗಳಲ್ಲಿ ದೇವತೆಗಳು ನೆಲೆಸಿರುತ್ತಾರೆ ತುಳಸಿಯ ನೀರು ಮತ್ತು ಮೃತ್ತಿಕೆ ತಲೆಯ ಮೇಲೆ ಪ್ರೋಕ್ಷಿಸಿಕೊಂಡವನಿಗೆ ಎಲ್ಲ ನದಿ ಮತ್ತು ತೀರ್ದಗಳಲ್ಲಿ ಸ್ನಾನ ಮಾಡಿದ ಫಲ ದೊರಕುತ್ತದೆ ಯಾರ ಮನೆಯಲ್ಲಿ ತುಳಸಿ, ಸಾಲಿಗ್ರಾಮಕ್ಕೆ ಪೂಜೆ ಇದೆಯೋ ಅಂತಹವನ ಮನೆಯನ್ನು ಶ್ರೀ ಹರಿಯ ಬಲಿಚಕ್ರವರ್ತಿಯ ಮನೆಯಂತೆ ಕಾಯುತ್ತಾನೆ "ತುಳಸಿ ಇಲ್ಲದ ಪೂಜೆ ವಲ್ಲನೋ, ಹರಿ ತಾಕೊಳ್ಳನೋ" ಎಂದು ಶ್ರೀ ಪುರಂದರ ದಾಸರು ನುಡಿದಿದ್ದಾರೆ - ಎಲ್ಲ ಬಂಗಾರವೂ ಒಂದೆಡೆ ಮತ್ತು ಒಂದು ದಳ ತುಳಸಿ ಸಮಾನವೆಂದು ಸತ್ಯಬಾಮೆಗ ಹರಿಯು ಅರಿವುಮಾಡಿದ್ದಾರೆ

ಎಲ್ಲ ವೈಭವವಿದ್ದರೂ ದೇವರ ಪೂಜೆಗೆ ತುಳಸಿ ಅತಿಮುಖ್ಯ ತುಳಸಿ ಸಿಕ್ಕದಿದ್ದಲ್ಲಿ ಕಾಷ್ಠ, ಇಲ್ಲದಿದ್ದರೆ ಎಲೆ, ಅದವಾ ಮೃತ್ತಿಕೆ ಯಾವುದು ಇಲ್ಲದಿದ್ದಲ್ಲಿ ಅದೇ ತುಳಸಿಯನ್ನು ಮೂರುವಾರದವರೆಗೂ ತೊಳೆದು ಉಪಯೋಗಿಸಬಹುದೆಂದು ಶಾಸ್ತ್ರದಲ್ಲಿ ಅಪ್ಪಣೆ ಕೊಡಿಸಿದ್ದಾರೆ ಕಡೆಯಾದಾಗಿ ತುಳಸಿ ತುಳಸೀ ಎಂದು ಬರೇ ನುಡಿಯಲ್ಲಿ ಪೂಜಿಸಿದರೂ ಶ್ರೇಷ್ಠ ಮತ್ತು ದೇವರಿಗೆ ಪ್ರಿಯ

## ತುಳಸಿ ವೈಜ್ಞಾನಿಕ ದೃಷ್ಟಿಯಿಂದ :

ತುಳಸಿ ತಂಪಾಗಿರುವ ನೆಲದಲ್ಲಿ ಮಾತ್ರ ಬೆಳೆಯುವುದು ಕೆಂಪು ಮತ್ತು ನದಿನೀರು ಕೊಚ್ಚಿ ತರುವ ಮಣ್ಣಗಳಲ್ಲಿ ವಿಶೇಷವಾಗಿ ಬೆಳೆಯುತ್ತ ಶ್ರೀ ಕೃಷ್ಣ ತುಳಸಿ ಮತ್ತು ಶ್ರೀ ತುಳಸಿ ಎಂದು ಎರಡು ಬಗೆಯದಾಗಿ ಇರುತ್ತೆ, ಕೃಷ್ಣ ತುಳಸಿ, ಎಲೆಗಳು ಹೊಂಬಣ್ಣ ಮತ್ತು ಕಪ್ಪು ಮೋಡದ ಬಣ್ಣವನ್ನು ಹೊದಿರುತ್ತೆ

ಶ್ರೀ ತುಳಸಿ ಹಸಿರು ಎಲೆಗಳು ಹಾಗೆಯೇ ಹಸಿರು ಹಸಿರಾಗಿ ಇರುತ್ತೆ ಈ ಎರಡು ಗಿಡಗಳು ಹೇರಳವಾಗಿ ಬದರಿ ಗಂಗಾತಟದ ಮಣ್ಣಿನಲ್ಲಿ ತಾನೇ ತಾನಾಗಿ ಅಲ್ಲಿಯ ಸ್ವಾಭಾವಿಕ ಗಿಡಗಳ ತರಹ ಬೆಳೆಯುತ್ತೆ, ಆಂಧ್ರದ ತಿರುಪತಿಯ ಅಕ್ಕಪಕ್ಕದ ಗುಡ್ಡಗಳಲ್ಲೂ ಹುಲುಸಾಗಿ ಬರುತ್ತೆ, ಬೇರೆ ಕಡೆಗಳಲ್ಲಿ ತುಳಸಿಯನ್ನು ಪಾಲಿಸಿ ಬೆಳಸಿದಾಗ ಬರುತ್ತೆ, ಭಾರತದ ಕಲ್ಲು ಸಂಶೋದನಾ ಕೇಂದ್ರದವರು (ಜಿಯಾಲಾಜಿಕಲ್ ಸರ್ವೆ ಆಫ್ ಇಂಡಿಯ) ತಮ್ಮ ತನಿಖೆಯಲ್ಲಿ ತುಳಸಿ ಗಿಡ ಎಲ್ಲೆಲ್ಲಿ ಹೆಚ್ಚಾಗಿ ಬರುತ್ತದೆ ಎಂಬುದು ತಮ್ಮ ಸಮೀಕ್ಷೆಯಲ್ಲಿ ಈ ರೀತಿ ತಿಳಿಸಿದ್ದಾರೆ . "ಕ್ರೋಮಿಯಂ" ಎಂಬ ದಾತು ಭೂಮಿಯಲ್ಲಿ ಹೆಚ್ಚಾಗಿದ್ದಾಗ ತುಳಸಿಗಿಡಗಳು ತಾನಾಗಿಯೇ ವಿಷೇಶವಾಗಿ ಬೆಳೆಯುತ್ತವೆ ಎಲ್ಲೆಲ್ಲಿ ತುಳಸಿ ಗಿಡಗಳು ಹೆಚ್ಚು ಹೆಚ್ಚಾಗಿ ಇರುತ್ತವೆಯೋ ಅಲ್ಲಿಯ ಮಣ್ಣಿನಲ್ಲಿ "ಕ್ರೋಮಿಯಂ" ಅಂಶ ಹೆಚ್ಚಾಗಿ ಇರುತ್ತದೆ ಹಾಗೆಂದರೆ ತುಳಸಿ ಗಿಡವಿರುವ ಕಡೆ ಭೂಮಿಯಲ್ಲಿ ಕ್ರೋಮಿಯಂ ದಾತು ಇರುವುದೆಂಬುದನ್ನು ಪತ್ತೆ ಹಚ್ಚಬಹುದು ತುಳಸಿ ಗಿಡಕ್ಕೂ "ಕ್ರೋಮಿಯಂ' ' ದಾತುವಿಗೂ ಮತ್ತು ಮಾನವನಿಗೂ ನಿಕಟವಾದ ಸಂಬಂದವಿದೆಯೆಂದರೆ ಅದು ಅತಿಶಯೋಕ್ತಿಯ ಮಾತಾಗಲಾರದು

ಅಮೆರಿಕದ ವೈಜ್ಞಾನಿಕರು ತಮ್ಮ ಸಂಶೋಧನೆಯಲ್ಲಿ ಮುಖ್ಯವಾಗಿ ಮಾನವನ ಹೃದಯದ ಬಡಿದಕ್ಕೆ ಸಂಬಂದಪಟ್ಟ ಹಾಗೆ ಕ್ರೋಮಿಯಂ ಧಾತುವಿನ ಅಂಶ ಕೆಲಸಮಾಡುತ್ತದೆಂದು ತಿಳಿಸಿದ್ದಾರೆ ಪಿಷ್ಠ ಪದಾರ್ದಗಳನ್ನು ಮತ್ತು ಪೌಷ್ಟಿಕ ಆಹಾರವನ್ನು ಹೆಚ್ಚಾಗಿ ಸೇವಿಸುವವರಿಗೆ ಹೆಚ್ಚಿನ ಮಾತ್ರದಲ್ಲಿ ಈ ಕ್ರೋಮಿಯಂ ಧಾತು ಬೇಕಾಗುವುದು ಇಲ್ಲದಿದ್ದಲ್ಲಿ ಅವರಿಗೆ ಹೃದಯ ರೋಗದ ಜಾಡ್ಯ ಮತ್ತು ನಿಃಶಕ್ತಿಯ ಹೃದಯ ವೇದನೆಗಳಿಗೆ ಗುರಿಯಾಗುತ್ತಾರೆಂದು ಅವರ ತನಿಖೆಯಲ್ಲಿ ತಿಳಿಸಿದ್ದಾರೆ

ನಿಜವಾಗಿಯೂ ವೈಜ್ಞಾನಿಕ ದೃಷ್ಟಿಯಿಂದ ನಾವು ಈಗ ನಮ್ಮ ಹಿಂದೂ ಪರಂಪರೆಯನ್ನು ಗಮನಿಸತಕ್ಕದ್ದು ಹಿಂದುಗಳು ತುಳಸಿ ಉಪಯೋಗಿಸುತ್ತಾರೆ ದೇವರ ತೀರ್ಥದಲ್ಲಿ, ಮಾಡಿರುವ ಅಡಿಗೆಯಲ್ಲಿ ದೇವರಿಗೆ ಸಮರ್ಪಿಸಿ ನೇವೇದ್ಯವೆಂದು ತುಳಸಿದಳವನ್ನು ಹಾಕಿ ಪ್ರತಿನಿತ್ಯ ಊಟ ಮಾಡುವುದು



# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ಶ್ರೀನಿವಾಸ ಮಂಗಾಪುರ.

ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಆಗಮಿಸುವ ಮುನ್ನ ಆರುತಿಂಗಳಕಾಲ ತಂಗಿದ್ದ ಸ್ಥಳ ತಿರುಮಲೆಯಲ್ಲಿನ ಧ್ರುವಮೂರ್ತಿಗಿಂತ ೨ ಅಡಿ ಹೆಚ್ಚು ಎತ್ತರದ ಧ್ರುವಮೂರ್ತಿ ಇಲ್ಲಿದ್ದು, ಈ ಗುಡಿಯನ್ನು ಹಾದು ತಿರುಮಲೆಗೆ ಮೆಟ್ಟಿಲ ಮೂಲಕ ಏರಬಹುದು ತಿರುಪತಿ -- ಮದನಪಲ್ಲಿ ರಸ್ತೆಯಲ್ಲಿ ತಿರುಪತಿಯಿಂದ ಆರು ಮೈಲಿದೂರದ ಶ್ರೀನಿವಾಸ ಮಂಗಾಪುರಕ್ಕೆ ಚಂದ್ರಗಿರಿ ಹಾಗೂ ತಿರುಪತಿಗಳಿಂದ ಬಸ್ ಸೌಕರ್ಯವಿದೆ

## ದರ್ಶನ ಹಾಗೂ ಸೇವಾ ವಿವರಗಳು

| ಭಾನು, ಸೋಮ, ಮಂಗಳ, ಬುಧ, ಗುರು ಹಾಗೂ ಶನಿವಾರಗಳ ಕಾರ್ಯಕ್ರಮ | | ಶುಕ್ರವಾರಗಳಲ್ಲಿ |
|---|---|---|
| ಸುಪ್ರಭಾತ | ಪ್ರಾ 5--00 ಪ್ರಾ 5--30 | ಪ್ರಾ 5--00 ಪ್ರಾ 5--30 |
| ವಿಶ್ವರೂಪ ಸರ್ವದರ್ಶನ | ಪ್ರಾ 5--30 ಪ್ರಾ 6--00 | ಪ್ರಾ 5--30 ಪ್ರಾ 6--00 |
| ತೋಮಾಲ, ಕೊಲುವು | | |
| ಪಂಚಾಂಗಶ್ರವಣ | ಪ್ರಾ 6--00 ಪ್ರಾ 6--30 | ಪ್ರಾ 6--00 ಪ್ರಾ 6--30 |
| ಸಹಸ್ರನಾಮಾರ್ಚನೆ | ಪ್ರಾ 6--30 ಪ್ರಾ 7--00 | ಪ್ರಾ 6--30 ಪ್ರಾ 7--00 |
| ಮೊದಲನೇ ಗಂಟೆ | ಪ್ರಾ 7--00 ಪ್ರಾ 7--30 | ಪ್ರಾ 7--00 ಪ್ರಾ 7--30 |
| ಸರ್ವದರ್ಶನ | ಪ್ರಾ 7--30 ಪ್ರಾ 10--00 | *ಅಬಿಷೇಕ ಪ್ರಾ 7--30 ಪ್ರಾ 8--30 |
| | | ಸಮರ್ಪಣ ಪ್ರಾ 8--30 ಪ್ರಾ 9--30 |
| 2ನೇ ಅರ್ಚನೆ | | |
| 2ನೇ ಗಂಟೆ | ಪ್ರಾ 10--00 ಪ್ರಾ 10--30 | ಪ್ರಾ 9--30 ಪ್ರಾ 10--30 |
| *ಆರ್ಜಿತ | | ಕಲ್ಯಾಣೋತ್ಸವ ಪ್ರಾ 10--30 ಮ 12--00 |
| ಸರ್ವದರ್ಶನ | ಪ್ರಾ 10--30 ಸಂ 6--30 | ಪ್ರಾ 10--30 ಸಂ 6--30 |
| ರಾತ್ರಿ ಕೈಂಕರ್ಯ | | |
| ರಾತ್ರಿ ಗಂಟೆ | ಸಂ 6--30 ರಾ 7--00 | ಸಂ 6--30 ರಾ 7--00 |
| ಸರ್ವದರ್ಶನ | ರಾ 7--00 ರಾ 8--45 | ರಾ 7--00 ಪ್ರಾ 8--45 |
| ಏಕಾಂತ ಸೇವೆ | ರಾ 8--45 ರಾ 9--00 | ರಾ 8--45 ರಾ 9--00 |

| | |
|---|---|
| * ಆರ್ಜಿತ ಕಲ್ಯಾಣೋತ್ಸವ ಶುಲ್ಕ | ರೂ 200--00 |
| * ಅಭಿಷೇಕ (ಶುಕ್ರವಾರಗಳಲ್ಲಿ) ಶುಲ್ಕ | ರೂ 100--00 |
| ಅರ್ಚನೆ (ಒಂದು ವರ್ಷ) | ರೂ 42--00 |
| ಶಾಶ್ವತ ನಿತ್ಯಾರ್ಚನೆ | ರೂ. 542--00 |

ನಮ್ಮ ಹಿಂದಿನಿಂದ ಬಂದ ಪರಂಪರೆ ಇವರಲ್ಲಿ ಎಷ್ಟುವಿವೇಚನೆ ಮತ್ತು ಗೂಢಾರ್ದವಿದೆ ಎಂಬುದು ನಾವು ತಿಳಿಯಬೇಕು ಪ್ರತಿನಿತ್ಯ ಬದರಿ, ತಿರುಪತಿ ಉಡುಪಿ ಮತ್ತು ಪೂರಿ ಜಗನ್ನಾದ ದೇವಾಲಯಗಳಲ್ಲಿ ತುಳಸಿ ಸೇವೆಯಿಲ್ಲದೆ ಪೂಜ ಅಲಂಕಾರಗಳು ನಡೆಯುವುದೇ ಇಲ್ಲ ಯಾವತ್ತೂ ತುಳಸಿಯನ್ನು ಸೇವಿಸಿರದ ಯಾತ್ರಿಕ ಆವಾಗಲಾದರೂ ಪ್ರಸಾದ ಸೇವನೆಯಲ್ಲಿ ಭಕ್ತಿ ಭಾವದಿಂದ ಅದನ್ನು ತೆಗೆದುಕೊಳ್ಳುತ್ತಾನೆ ಹೀಗಲಾದರೂ ಕ್ರೋಮಿಯಂ ಧಾತು ಅವನ ಶರೀರಕ್ಕೆ ಹೋಗುತ್ತದೆ

ತುಳಸಿಯ ಸೇವನೆಯಿಂದ ಚರ್ಮರೋಗಗಳು ನಿವಾರಣೆಯಾಗುತ್ತದ ನೆಗಡಿಗೆ ಮತ್ತು ಜ್ವರ ಇವುಗಳ ನಿವಾರಣೆಗೆ ತುಳಸಿ ಬಹು ಉಪಯುಕ್ತ ಸೂಕ್ಷ್ಮಾಣುಗಳನ್ನು, ರಕ್ತ ಒತ್ತಡವನ್ನು ಮತ್ತು ಹೊಟ್ಟೆ ಹುಣ್ಣು ಇವುಗಳಿಗೆ ತುಳಸಿ ದಿವ್ಯೌಷದ ಪ್ರತಿನಿತ್ಯ ತುಳಸಿಗಾಳಿ, ತುಳಸಿ ಎಲೆ ಸೇವನೆ ಮಾಡುವವನಿಗೆ ರೋಗದ ಭಯವಿಲ್ಲ

ಇವುಗಳನ್ನೇ ನಮ್ಮ ದಾರ್ಮಿಕರು ಸೂಕ್ಷ್ಮವಾಗಿ ಮಾನವನಿಗೆ ದೈನಂದಿನ ಕಾರ್ಯಕ್ರಮದಲ್ಲಿ ತುಳಸಿಯನ್ನು ನಾಂದಿಯಾಗಿ ತನ್ನ ಪೂಜೆ, ಪುನಸ್ಕಾರಗಳಲ್ಲಿ ವಿದಿವತ್ತಾಗಿ ಸೇರಿಸಿದರು ಪ್ರತಿ ಮನೆಯ ಮುಂವೆ ಬೃಂದಾವನವಿರದೇಕೆಂಬ ಕಡ್ಡಾಯ ಮಾಡಿದರು ಈ ತುಳಸಿಯ ಪೂಜೆ, ತುಳಸಿಯ ಬಳಕೆಗೆ ನಿಯಮಮಾಡಿದರು ಸಂಪ್ರದಾಯವೆಂದರು

ಶ್ರೀ ಜಗನ್ನಾದ ದಾಸರು ತುಳಸಿಯ ವಿಷಯವಾಗಿ ಈ ರೀತಿ ಹೇಳಿರುತ್ತಾರೆ

'ತುಳಸಿ ಇಲ್ಲದ ಮನ ಮಾದಿಗರ ಮನೆ
ತುಳಸಿ ಇಲ್ಲದ ಬೀದಿ ನರಕಕ್ಕ ದಾರಿ
ತುಳಸಿ ಇಲ್ಲದ ತೀರ್ದ ವ್ಯರ್ದ
ತುಳಸಿ ನೇವೇದ್ಯ ಪರಗತಿಗೆ ಸಾಧಕ"

ಈಗಲಾದರೂ ಇದನ್ನು ಅರಿತು ಮಾನವ ತನ್ನ ಹಿಂದಿನ ಪೀಳಿಗೆಗೆ ಚಿರಋಣಿಯಾಗಬೇಕು ಹಾಕಿರುವ ಹೆಜ್ಜೆಯಲ್ಲಿ ನಡೆದರೆ ಸಾಕು ಇಹ ಪರ ಸಾಧನ ಸುಖ, ಸೌಖ್ಯ ಖಂಡಿತ

ಈಗಿನ ಒತ್ತಡ ಕಾರ್ಯಕ್ರಮಗಳಲ್ಲಿ ಮನುಷ್ಯ ತುಳಸಿ ಗಿಡವನ್ನು ಮರೆತ್ತಿದ್ದಾನೆ ಗಿಡಬೆಳಸಲು ಸ್ಥಳ ವಿಲ್ಲ ಪೂಜಿಸಲು ಸಮಯವಿಲ್ಲ, ತಿಳಿದುಕೊಳ್ಳದೇಕೆಂದು ಪರಿಜ್ಞಾನವಿಲ್ಲ

ನಾವು ಹೇಗೆ ಟಿ ವಿ ಆಂಟೇನ ಮನೆಯ ಮೇಲೆ ಇಡುತ್ತೆವೆಯೋ ಹಾಗೆಯೇ ಪ್ರತಿಮಾನವ ಒಂದು ತುಳಸಿಗಿಡ ವಿಟ್ಟು ಅದನ್ನು ಪೂಜಿಸಿ ಬಳಸಿದಲ್ಲಿ ತನ್ನ ಶ್ರೇಯಸ್ಸು ಖಂಡಿತ 

# ಶ್ರೀಮದ್ವೇಂಕಟನಾಥರು

---ಸಿ. ಗೋವಿಂದಾಚಾರ್

ಪರಮಾತ್ಮನನ್ನು ಅರಿಯಲು ಆಚಾರ್ಯೋಪಾಸನಯು ಒಂದು ಮುಖ್ಯ ಸಾಧನವಾಗಿರುತ್ತೆ ಇಂತಹ ದಾರ್ಮಿಕ ಹಾಗೂ ಆದ್ಯಾತ್ಮಿಕ ವಿಚಾರಗಳಲ್ಲಿ ಮಾರ್ಗದರ್ಶನ ನೀಡಲು ಹಾಗೂ ಸಂಸ್ಕೃತ ಸಾಹಿತ್ಯ ಸುಲಭವಾಗಿ ಗ್ರಹಿಸಲು ಆಚಾರ್ಯ ಪರಂಪರೆ ಹಿರಿದಾದ ಪಾತ್ರವಹಿಸಿದೆ ತನ್ನಿಂದಾಗದ ಕೆಲಸವನ್ನು 'ಅತತೀರ್ಯ ಕಲೌಯಾಯಂ ಸೂರಯ ಶಾಸನಾನ್ಮಹ' -- ಬೂಲೋಕದಲ್ಲಿ ಆಚಾರ್ಯ ಪೀಠವನ್ನು ಅಲಂಕರಿಸಿ ಎಂದು ಭಗವಂತನು ನಿತ್ಯ ಸೂರಿಗಳಿಗೆ ಆದೇಶ ನೀಡುವನು ಈ ಮಹಾ ಸಂಕಲ್ಪಕ್ಕೆ ಅವನ ದಯೆಯೇ ಕಾರಣ "ವಿಗಾಹೇ ತೀರ್ದ ಬಹುಳಾಂ ಶೀತಲಾಂ ಗುರುಸಂತತಿಂ ಶ್ರೀನಿವಾಸ ದಯಾಂಬೋಧಿ ಪರೀವಾಹ ಪರಂಪರಾಂ" ಎಂದು ದಯಾಶತಕದಲ್ಲಿ ಆಚಾರ್ಯರ ಅವತಾರಿಕೆ ಉಲ್ಲೇಖವಾಗಿರುತ್ತೆ ತಮ್ಮ ಪಿತುವು ಪೂರ್ವ ಜನ್ಮದಲ್ಲಿ ನಿತ್ಯಸೂರಿಗಳಾಗಿದ್ದರು, ಬಳಿಕ ಆಚಾರ್ಯರೂಪದಲ್ಲಿ ಅವತರಿಸಿ ಅವತಾರ ಕೃತ್ಯವನ್ನು ಮುಗಿಸಿ ಮತ್ತೆ ನಿತ್ಯಸೂರಿಗಳಾಗಿರುತ್ತಾರೆ ಎಂದು ನಮಿನರಾಚಾರ್ಯರು ದೇಶಿಕ ಮಂಗಳದಲ್ಲಿ ಹೇಳಿರುತ್ತಾರೆ "ನಭಸ್ಯ ಮಾಸಿ **ಶ್ರೋಣಾಯಾಮ** ವತೀರ್ಣಾಯ ಸೂರಯೆ" ಶ್ರೀಪತಿ, ಶ್ರೀಮದಾಳ್ವಾರರು ರಾಮಾನುಜರಂಥಾ ಪೂರ್ವಾಚಾರ್ಯರು ಜಲಾಶಯವಿದ್ದಂತೆ ದೇಶಿಕರು ಪಿಳ್ಳೈಲೋಕಾಚಾರ್ಯರು, ಮನವಾಳ ಮುನಿಗಳು ಕಾಲುವೆಗಳಿದ್ದಂತೆ ಆಚಾರ್ಯ ಪರಂಪರೆಯಲ್ಲಿ ದೇಶಿಕರಿಗೆ ರಾಮಾನುಜರಷ್ಟೇ ಉತ್ತಮ ಸ್ಥಾನವಿದೆ ದೇಶಿಕರಂಥ ಮಹಾನ್‌ಗಳ ಅವತಾರಗಳು ಭಗವದವತಾರಗಳಂತೆ ಶ್ರೇಯಸ್ಕರವಾದುದು ಈ ಅವತಾರಗಳಲ್ಲಿ ದುಷ್ಟ ಸಂಹಾರವಿರುವುದಿಲ್ಲ

12/13 ನೆ ಶತಮಾನ ಒಂದು ಪರ್ವಕಾಲ ಮ್ಲೇಚ್ಛರ ಹಾವಳಿ, ಲೂಟಿ, ಮತಗಳ ತಿಕ್ಕಾಟ, ಶ್ರೀ ವೈಷ್ಣವ ಮತದಲ್ಲೇ ತೆಂಗಲೆ, ವಡಹಲೈ ಎಂದು ಎರಡು ಪಂಗಡಗಳಾಗಿ ಘರ್ಷಣೆ ಅಶಾಂತಿಗಳಿಂದ ಕೂಡಿದ ಈ ಸಂದಿಕಾಲದಲ್ಲಿ ಸಮಯ ಸಂಜೀವಿನಿಯಂತೆ 'ಯದಾಯದಾಹಿ' ಎಂಬ ಸಂಕಲ್ಪಾನುಸಾರವಾಗಿಯೇ ಮಹಾತ್ಮರೊಬ್ಬರ ಅವತಾರವಾಯಿತು ೧೨೬೮ ಭಾದ್ರಪದ ಮಾಸ ಶ್ರವಣ ನಕ್ಷತ್ರದಂದು ಕಂಚಿಯ ತೂಪಿಲ್ ಅಗ್ರಹಾರದಲ್ಲಿ ತೋತಾರಮ್ಮ -- ಅನಂತಸೂರಿ ದಂಪತಿಗಳಿಗೆ ವೆಂಕಟನಾದರು (ವೇಳಿಕರು) ಜನಿಸಿದರು ಶ್ರೀನಿವಾಸನ ಘಂಟಾಂಶದಿಂದ ಜನಿಸಿದ್ದರಿಂದ 'ಘಂಟಾವತಾರ' ಎಂಬ ದಿವ್ಯನಾಮ ಇದೆ ಈ ಪ್ರಸಂಗವನ್ನು 'ಪ್ರಾದುರಭವ ಜಗದಿ ದೈತ್ಯರಿಪು ಘಂಟಾಂತ' ಎಂದು ಅಣ್ಣಂಗ್ರಾಚಾರ್ಯರು ಮತ್ತು ದೇಶಿಕರೇ ತಮ್ಮ ಕೃತಿಯಾದ ಸಂಕಲ್ಪಸೂರ್ಯೋದಯದಲ್ಲಿ 'ಬುದಜನ್ಯೈರುಪಪತ್ತಿ ಭೂಮ್ನಾ ದಂಟಾಪತೇ ಸ್ಸಮ ಜನಿಷ್ಟಯದಾತ್ಮನೇತಿ' ಎಂದು ಉಲ್ಲೇಶಿಸಿರುತ್ತಾರೆ ಆಟ ಊಟ ತಿಂಡಿ ಮೋಜು ಇತ್ಯಾದಿಗಳಲ್ಲಿ ಯಾವ ಆಸಕ್ತಿಯೂ ಇಲ್ಲದ ಬಾಲಕನಿಗೆ ಸಕಾಲಕ್ಕೆ ಚೌಲೋಪನಯನಗಳು ಜರುಗಿದುವು. ಪ್ರಸಿದ್ಧ ವಿದ್ವಾಂಸರ ಮದ್ಯೆ ನಡೆಯುವ ಚರ್ಚೆ, ಸದಸ್ಸು ಕಾಲಕ್ಷೇಪಗಳಲ್ಲಿ ಮನಸ್ಸು ಲೀನವಾಯಿತು ಬಾಗವತರನ್ನು ಕಂಡರೆ ಅಭಿಮಾನ ಗೌರವ ೧೬ ವರ್ಷಗಳ ವಿದ್ಯಾರ್ದಿ ದೆಸಯನ್ನು ಅನುಬವಿಸಿ ೨೦ ರ ವಯಸ್ಸಿನಲ್ಲೇ ಅನುಪಮ ಬಕ್ತಿ ವಯಸ್ಸಿಗೆ ತಕ್ಕಂದಾ ಪಾಂಡಿತ್ಯ ವಾಗೂ ಜ್ಞಾನಾಬಿವೃದ್ಧಿಯಾಗಿ ಸ್ವಲ್ಪಕಾಲದಲ್ಲೇ ಪ್ರಸಿದ್ಧಿಯಾದರು ಸೋದರ ಮಾವ ಆತ್ರೇಯ ರಾಮಾನುಜರೇ ದೇಶಿಕರಿಗೆ ಎಲ್ಲ ರೀತಿಯಲ್ಲಿ ಗುರುವಾಗಿದ್ದರು ದೇಶಿಕರ ಜ್ಞಾಪಕ ಶಕ್ತಿ, ಅಳತೆಗೆ ಮೀರಿದ್ದು ಹಿರಿಯ ಭಾಗವತರಾದ ನಡಾದೂರ್ ಅಮ್ಮಾಳ್ ಒಮ್ಮೆ ಕಾಲಕ್ಷೇಪದ ವಿಚಾರವನ್ನು ಜ್ಞಾಪಿಸಿಕೊಳ್ಳಲು ಚಡಪಡಿಸುತ್ತಿದ್ದಾಗ ೫ ವರ್ಷದ ಬಾಲಕ ದೇಶಿಕರು ನೆರವಾದರು ಎಲ್ಲರೂ ದೇಶಿಕರನ್ನು ಮೆಚ್ಚಿಕೊಂಡರು 'ಮುಂದೆ ನೀನು ವೇದಾಂತಾಚಾರ್ಯನಾಗಬಹುದೆಂದು ನನಗನಿಸುತ್ತದೆ' ಎಂದು ಗುರುಗಳು ಆಶೀರ್ವಾದ ಮಾಡಿದರು ದೇಶಿಕರಿಗೆ ಪಾರ ಹೇಳಲು ನಾಮುಂದು ತಾಮುಂದು ಎಂದು ವಿದ್ಯಾ ಗುರುಗಳು ಉತ್ಸಾಹಭರಿತರಾಗುತ್ತಿದ್ದರು

## ಅನುವಮ ಭಕ್ತಿ ·

ಅನನ್ಯ ಭಕ್ತಿಯಿಂದ ಬಗವತ್ಕೃಪೆ ಖಂಡಿತ ಉಂಟಾಗುವುವೆಂಬ ಮಹಾವಿಶ್ವಾಸ ಅವರಲ್ಲಿತ್ತು ಅವರು ಸ್ಮರಿಸದ ದೇವರಿಲ್ಲ ಏಕ ನಿಷ್ಠಯಿಂದ ಭಗವಂತನನ್ನೇ ಆಶ್ರಯಿಸಿ ತಮ್ಮ ಇಡೀ ಜೀವನವನ್ನೇ ಅವನ ಸೇವೆಗಾಗಿ ಮುಡುಪಾಗಿಟ್ಟರು 'ನಾವು ಭಗವಂತನಲ್ಲಿ ಪ್ರಾರ್ದಿಸಬೇಕಾದ್ದು ಎರಡೇ ಬಕ್ತಿ ಮೂಡುವಂತೆ ಕೃಪೆಮಾಡುವುದು ಮತ್ತು ಬಗವಂತನನ್ನು ಅರಿಯಲು ದೇಕಾಗಿರುವ ಜ್ಞಾನ, ಬೇರಾವ ಪ್ರಾರ್ದನೆಯೂ ನಮ್ಮನ್ನು ಅದೋಗತಿಗೆ ಒಯ್ಯುವುದು ನಾವು ದೈವ ಭಕ್ತಿಯುತವಾದ ಜೀವನವನ್ನೇ ಸಾಗಿಸದೇಕು **ಆಚಾರ್ಯರನ್ನು** ಪರಮಾತ್ಮ



ನಂತೆಯೇ ಉಪಾಸನೆ ಮಾಡಿ ಆದ್ಯಾತ್ಮಿಕ ಮಾರ್ಗದಲ್ಲೇ ಮುನ್ನಡೆದು ಭಗವಂತನ ಸಾಯುಜ್ಯಾದಿಗಳನ್ನು ಚರಮದೆಸೆಯಲ್ಲಿ ಹೊಂದುವುದೇ ಹೆಗ್ಗುರಿಯಾಗಬೇಕು' ಎಂದು ಬೋದಿಸಿರುತ್ತಾರ ಮಂತ್ರಗಳನ್ನು ತಾವು ಹೇಳುವಾಗಲೂ ಹಾಗೂ ಶಿಷ್ಯರಿಗೆ ಮಂತ್ರೋಪದೇಶ ಮಾಡುವಾಗಲೂ ಗುರುಪರಂಪರೆಯನ್ನು ಮನಸ್ಸಿನಲ್ಲಿ ಚಿತ್ರಿಸಿಕೊಳ್ಳುತ್ತಿದ್ದರು ಅವರ ಇಷ್ಟದೈವ ವರದರಾಜ ವರದನ ರೂಪ ನೋಡಿದ ದೇಶಿಕರು 'ನನಗೆ ವೈಕುಂಠ ಮೋಕ್ಷಾದಿಗಳಲ್ಲಿ ಆಸೆಯೇ ಮೂಡದು ಈ ಅರ್ಚಾಮೂರ್ತಿಯ ಸೊಬಗನ್ನು ಸವಿದ ನಾನೇ ದನ್ಯನು ಪಿತ್ರಾರ್ಜಿತ ಅಥವ ಸ್ವಯಾರ್ಜಿತ ಸ್ವತ್ತಾವುದೂ ನನ್ನಿಲ್ಲಿಲ್ಲ ಹಸ್ತಿ ಗಿರಿಯಲ್ಲಿರುವುದೊಂದೇ ನನ್ನ ಆಸ್ತಿ ಅವನೇ ನನ್ನ ದೊರೆ' ಎಂದು ಉದ್ಘೋಷಿಸಿ ಹಸ್ತಿಗಿರಿ ಮಹಾತ್ಮೆ ಮತ್ತು ವರದರಾಜ ಪಂಚಾಶತ್ ಕೃತಿಗಳನ್ನು ರಚಿಸಿರುತ್ತಾರೆ ಮ್ಲೇಚ್ಛರ ಹಾವಳಿಯಿಂದ ಪಾರಾಗಲು ಶ್ರೀರಂಗನಾಥನನ್ನು ಪ್ರಾರ್ಥಿಸಿರುವ ಕೃತಿ ಅಭೀತಿಸ್ತವ ಶ್ರೀರಂಗನಾದನೇ ದಶಾವತಾರಗಳನ್ನು ಎತ್ತಿರುವನೆಂಬ ಭಾವನೆಯಿಂದ ದಶಾವತಾರ ಸ್ತೋತ್ರವನ್ನೂ ರಚಿಸಿದರು ಪಾಣರ ಅಮಲನಾದಿ ಪಿರಾನ್ ಕೃತಿಗೆ ಹೋಲುವಂತೆ 'ಜಗದ್ಧ್ಯಾನ ಸೋಪಾನ'ವನ್ನೂ ಸೃಷ್ಟಿಸಿ ಸೋಪಾನ ಕ್ರಮದಲ್ಲಿ ರಂಗನಾಥನನ್ನು ಮುಡಿಯಿಂದ ಅಡಿಯವರೆಗೆ ವರ್ಣಿಸಿರುತ್ತಾರೆ ಸಪ್ತಗಿರಿಯನ್ನು ಕಂಡೊಡನೆಯೇ ಭಕ್ತಿಯ ಆವೇಶದಲ್ಲಿ 'ಪರಮ ಕರುಣಾಳುವಾದ ಶ್ರೀನಿವಾಸನ ದಯೆಯೇ ಕಲ್ಲು ಸಕ್ಕರೆಯಂತೆ ಹೆಪ್ಪುಗಟ್ಟಿದೆ ಈ ದಯಾದೇವಿಯು ಶ್ರೀನಿವಾಸನ ಭಾರ್ಯೆಯರಲ್ಲಿ ಒಬ್ಬಳು' ಎಂದು ತಮ್ಮ ಕೃತಿಯಾದ ದಯಾಶತಕವನ್ನು ಪ್ರಕಾಶಪಡಿಸಿದ್ದಾರೆ ತಮ್ಮ ಕವಿತಾ ಶಕ್ತಿಯನ್ನು ಇಮ್ಮಡಿಸುವ ಪ್ರೇರಕಶಕ್ತಿಯೇ ತಿರುಪತಿ ಎಂದೂ ಹೇಳಿರುತ್ತಾರೆ ಸ್ತೋತ್ರ ರಚನೆ ಇವರ ಹವ್ಯಾಸವಾಯಿತು ಕಂಚಿಯಲ್ಲಿರುವ ಯಥೋಕ್ತಕಾರಿಯನ್ನು ಕುರಿತು ವೇಗಾಸೇತು ಸ್ತೋತ್ರವನ್ನೂ, ಮುಚುಕುಂದ ನಾಯಕ (ಯೋಗಾನೃಸಿಂಹ) ನನ್ನು ನೋಡಿ 'ಕಾಮಾಸಿಕಾಷ್ಟಕಂ', ತಿರುಪುಟ್ಕುಳಿಯ ವಿಜಯರಾಘವ ಸ್ವಾಮಿಯನ್ನು ಸೇವಿಸಿ ಪಾರಮಾರ್ಥಸ್ತುತಿಯನ್ನೂ, ಅಷ್ಟಭುಜಸ್ವಾಮಿಯನ್ನು ನೋಡಿ ಅಷ್ಟಭುಜಾಷ್ಟಕವನ್ನೂ, ಸುದರ್ಶನ ಮೂರ್ತಿಯನ್ನು ನೋಡಿ ಸುದರ್ಶನಾಷ್ಟಕವನ್ನೂ, ತಿರುಕೋಯಿಲೂರ್ ಕ್ಷೇತ್ರವನ್ನು ಕುರಿತು ದೇಹಳೀಶಸ್ತುತಿಯನ್ನೂ, ಭೂಸ್ತುತಿ ಗೋದಾಸ್ತುತಿಗಳನ್ನೂ ರಚಿಸಿರುತ್ತಾರೆ

ತಿರುವಹೀಂದ್ರಪುರ ಇವರ ಎರಡನೆ ಮನ ಈ ಎರಡೂ ಕ್ಷೇತ್ರಗಳನ್ನು ನಿರ್ಗಮಿಸದೇಕಾದರೆ ಅವರಿಗೆ ಮನಸ್ಸೇ ಬಾರದು ಇವರಲ್ಲಿರುವ ಕವಿತಾ ಶಕ್ತಿ, ಗ್ರಂಥರಚನಾ ಸಾಮರ್ಥ್ಯ, ಪವಾಡಶಕ್ತಿ, ಸವನೆ ಸೌಶೀಲ್ಯ ವೈರಾಗ್ಯ ವಿರಕ್ತಿ – ಎಲ್ಲವೂ ಅಳತೆಗೆ ಮೀರಿದ ಇವರ ಭಗವದ್ಭಕ್ತಿಯಿಂದಲೇ ಆಲೋಚನಾಶಕ್ತಿ ಕೂಡ ತಮ್ಮದಲ್ಲವೆಂದೂ ದಿವ್ಯಮಾತೆಯ ಅನುಗ್ರಹವೆಂದು ಆಶ್ಚರ್ಯಪಡುತ್ತಾರೆ ತಮ್ಮಂದಾ ಜಿಜ್ಞಾಸುಗಳಿಗೆ ವಾಕ್ಸಂಪತ್ತನ್ನೂ ಲೇಖನಾಸಾಮರ್ಥ್ಯವನ್ನೂ ದಯಪಾಲಿಸೆಂದು ವಿದ್ಯಾಲಕ್ಷ್ಮಿಯನ್ನು ಪ್ರಾರ್ಥಿಸುವರು 'ಶ್ರೋತ್ರೇಷು ಪುಂಸಾಂ ಅಮೃತಂ ಕ್ಷರಂತಿ ಸರಸ್ವತೀಂ ಸಂಶ್ರುತ ಕಾಮದೇನುಂ' -- ಹಯಗ್ರೀವ ಸ್ತೋತ್ರ

ತಿರುಮಂಗೈ ಎನ್ನುವ ಕನ್ಯೆಯ ಕೈಹಿಡಿದು ದಾಂಪತ್ಯ ಜೀವನಕ್ಕೆ ಕಾಲಿಟ್ಟರೂ ಲೌಕಿಕ ಆಡಂಬರ ಹಾಗೂ ಶ್ರೀಮಂತಿಕೆಯ ಜೀವನಕ್ಕೆ ಪ್ರಾಶಸ್ತ್ಯ ಕೊಡಲಿಲ್ಲ ದೋದನೆ, ಕಾಲಕ್ಷೇಪ, ಉಪನ್ಯಾಸ, ಬಿಡುವಾದಾಗ ಗ್ರಂದರಚನೆ, ಪಂಚಕಾಲಕೃತ್ಯ -- ಇವೇ ಇವರ ದಿನಚರಿ ಆದ್ಯಾತ್ಮಿಕ ಜೀವನದಲ್ಲಿ ಒಟ್ಟು ೩೦ ಬಾರಿ ಶ್ರೀಭಾಷ್ಯವನ್ನು ಪ್ರವಚನ ಮಾಡಿರುತ್ತಾರೆ ೪೭ನೆಯ ವಯಸ್ಸಿನಲ್ಲಿ ಕುಮಾರ ವರದನಾಥ ಎಂಬ ಪುತ್ರರತ್ನವನ್ನು ಪಡೆದರು

ಗ್ರಂದರತ್ನಗಳು -- ಆತ್ರೇಯ ರಾಮಾನುಜರು ಪರಮಪದ ಸೇರುವ ಮುನ್ನ ದೇಶಿಕರಿಗೆ ಗರುಡ

ಮಂತ್ರವನ್ನುಪದೇಶಿಸಿದ್ದರು ಕಂಚಿಯ ಆಚಾರ್ಯಪೀರಕ್ಕೆ ದೇಶಿಕರನ್ನು ಆಹ್ವಾನಿಸಲಾಗಿತ್ತು ದೇಶಿಕರ ಉನ್ನತಿಯನ್ನು ಸಹಿಸದವರು ಕಿರುಕುಳ ಕೊಡಲಾರಂಭಿಸಿದರು ಸ್ಥಳ ಬದಲಾವಣೆಯಾದರೆ ಎಲ್ಲಾ ಸರಿಹೋಗುವುದೆಂದು ಭಾವಿಸಿ ತಿರುವಹೀಂದ್ರಪುರಕ್ಕೆ ತೆರಳಿದರು ಗರುಡ ಮಂತ್ರ ಫಲಕಾರಿ ಆಯಿತು ಗರುಡ ಸಾಕ್ಷಾತ್ಕಾರದಿಂದ ಹಯಗ್ರೀವ ಮಂತ್ರೋಪದೇಶವಾಯಿತು ಯೋಗ ಹಯಗ್ರೀವ ಸ್ವಾಮಿ ಪ್ರಸನ್ನನಾದ ದೇಶಿಕರು ೩೨ ಶ್ಲೋಕಗಳ ಹಯಗ್ರೀವಸ್ತೋತ್ರವನ್ನು ರಚಿಸಿದರು ಅವರ ಅಮೋಘ ಪಾಂಡಿತ್ಯ ಹಾಗೂ ಸಾಹಿತ್ಯ ಬೆಳವಣಿಗೆಗೆ ಇದು ನಾಂದಿಯಾಯಿತು ಬಾಗ್ಯದ ಬಾಗಿಲು ತೆರೆಯಿತು ೧೫ ವರ್ಷಗಳ ಅವದಿಯಲ್ಲಿ ತಮ್ಮ ಸಾಹಿತ್ಯ ಬಂಡಾರವನ್ನು ಶ್ರೀಮಂತಗೊಳಿಸಿದರು ಕ್ಷೇತ್ರದಲ್ಲಿರುವ ಸನ್ನಿದಿಗಳ ಮೇಲೆ ಸ್ತೋತ್ರ ರಚಿಸಿದರು ಉದಾ -- ದೇವನಾಯಕ ಪಂಚಾಶತ್, ಅಚ್ಯುತಶತಕ (ಪ್ರಾಕೃತ ಬಾಷಯಲ್ಲಿ) ಗೋಪಾಲ ವಿಂಶತಿ ಮತ್ತು ರಘುವೀರಗದ್ಯ

ದೇಶಿಕರು ರಚಿಸಿರುವ ೧೦೬ ಗ್ರಂಥಗಳ ಪೈಕಿ ೧೧ ಲಬ್ಧವಾಗಿಲ್ಲ ೫೩ ತತ್ವಕ್ಕೆ ಸಂಬಂದಿಸಿದುವು, ೩೨ ಭಕ್ತಿ ಗೀತೆಗಳು (1866 ಪದ್ಯಗಳಿವೆ) ಮತ್ತು ೧೦ ಪೂರ್ವಾಚಾರ್ಯ ಕೃತಿಗಳ ಬಗ್ಗೆ ರಚಿಸಿರುವ ವ್ಯಾಖ್ಯಾನ ಗ್ರಂದಗಳು ರಾಮಾನುಜ ಗೀತಾಭಾಷ್ಯಕ್ಕೆ ತಾತ್ಪರ್ಯ ಚಂದ್ರಿಕೆ ಶ್ರೀಭಾಷ್ಯಕ್ಕೆ 'ತತ್ವಟೀಕಾ', ಈಶವಾಸೋಪನಿಷತ್‌ಗೆ -- ತತ್ವಮುಕ್ತಾಕಲಾಪ, ಭಗವದ್ವಿಷಯಗಳಿಗೆ ದ್ರಮಿಡೋಪನಿಷತ್ ತಾತ್ಪರ್ಯ ರತ್ನಾವಳಿ ಮತ್ತು ದ್ರಮಿಡೋಪನಿಷತ್ಸಾರ ಯಾಮುನರ ಸ್ತೋತ್ರರತ್ನಕ್ಕೆ ಸ್ತೋತ್ರ ರತ್ನಬಾಷ್ಯ, ವೇದಾಂತಸ್ತೋತ್ರಗಳ ಸಾರ ಹಾಗೂ ಶ್ರೀಭಾಷ್ಯ ಅಧ್ಯಯನ ಸುಲಬಮಾಡಲು ಅದಿಕರಣ ಸಾರಾವಳಿ, ಅನ್ಯಮತಗಳ ನಿರಾಕರಣೆ ಕುರಿತು ಶತದೂಷಿಣಿ, ಪರಮತಭಂಗಂ, ಷಣ್ಮತಗಳ ಮೇಲೆ ಟೀಕೆ ವ್ಯಾಖ್ಯಾನಗಳಿಗಾಗಿ ನ್ಯಾಯಸಿದ್ಧಾಂಜನಮ್ ಮತ್ತು ನ್ಯಾಯ ಪರಿಶುದ್ಧಿ, ನಾಟಕರೂಪದ ಸಂಕಲ್ಪಸೂರ್ಯೋದಯ, ಕಾಳಿದಾಸನ ರಘುವಂಶದ ಮಾದರಿಯಲ್ಲಿ ಯಾದವಾಭ್ಯುದಯ, ಮೇಘಸಂದೇಶದ ರೀತಿಯಲ್ಲಿ ಹಂಸ ಸಂದೇಶ (ದೂತಕಾವ್ಯ) ಇನ್ನೂ ಮುಂತಾದ ಅಮೋಘ ಕೃತಿಗಳನ್ನು ಸೃಷ್ಟಿಸಿ ತಮ್ಮ ಸಾಹಿತ್ಯವನ್ನು ಸಾಗರದಂತೆ ವಿಸ್ತರಿಸಿದ್ದಾರೆ ವ್ಯಾಸ, ವಾಲ್ಮೀಕಿ ಮತ್ತು ಕಾಳಿದಾಸ ದೇಶಿಕರ ನೆಚ್ಚಿನ ವ್ಯಕ್ತಿಗಳು, 'ಭಾಷಾ ಪಾಂಡಿತ್ಯ, ತರ್ಕ ಹಾಗೂ ಉತ್ತಮ ಕಾವ್ಯ ಲಕ್ಷಣ ಮತ್ತು ಎಲ್ಲಕ್ಕಿಂದಾ ಮಿಗಿಲಾಗಿ ಭಕ್ತಿಭಾವ ಅವರ ಕೃತಿಗಳಲ್ಲಿ ಅಡಗಿದೆ ಇವುಗಳನ್ನು ಓದಿದವರು ದೇಶಿಕರ ಧರ್ಮನಿಷ್ಠೆ ಮಾನವ ಕುಲದ ಉದ್ಧಾರವಾಗುವ ಅಂಶಗಳನ್ನು ಗ್ರಹಿಸುತ್ತಿದ್ದರು ಕಾವ್ಯಗಳಲ್ಲಿ ದರ್ಶನಸಾರವನ್ನೇ ತುಂಬಿದ್ದಾರೆ' ಎಂದು ಸಮಕಾಲೀನರಾದ ಅಕ್ಷೋಭ್ಯ ತೀರ್ಥರು ಹಾಗೂ ಅಪ್ಪಯ್ಯ ದೀಕ್ಷಿತರು ಹೊಗಳಿದ್ದಾರೆ

ಸಿದ್ಧಾಂತ ನಿರೂಪಣೆ, ವಿವರಣೆ ಮತ್ತು ಪ್ರಚಾರೋಪದೇಶಗಳೇ ಅವರ ಸಮಗ್ರಗ್ರಂಥಗಳಲ್ಲಿ ಎದ್ದು ಕಾಣುತ್ತವೆ ಊಹಿಸಲಸಾಧ್ಯವಾದ ಪಾಂಡಿತ್ಯ ಹಾಗೂ ಅಲೌಕಿಕ ಪ್ರತಿಭಾಶಕ್ತಿಯಿಂದ ವಿಶಿಷ್ಟಾದ್ವೈತವನ್ನು ವಿವಿದ ರೂಪಗಳಲ್ಲಿ ಬಗೆಗಳಲ್ಲಿ ಉದಾಹರಣೆಗಳ ಸಮೇತ ನಿರೂಪಿಸಿ ಪರಿಷ್ಕರಿಸಿ ಅವುಗಳಿಗೆ ತಕ್ಕಂದಾ ವೇದಾಂತಗ್ರಂದಗಳನ್ನು ರಚಿಸಿ ರಾಮಾನುಜ ಸಿದ್ಧಾಂತದ ಪತಾಕೆಯನ್ನು ಎತ್ತಿ ಹಿಡಿದಿದ್ದಾರೆ ಯತಿರಾಜರನ್ನು ಪರದೈವವೆಂದೇ ಬಾವಿಸಿ 'ಯತಿರಾಜಸಪ್ತತಿ'ಯನ್ನೂ ರಚಿಸಿದ್ದಾರೆ ಶರಣಾಗತಿ ದೀಪಿಕೆ ಹಾಗೂ ನ್ಯಾಸದಶಕಕೃತಿಗಳನ್ನು ಸೃಜಿಸಿ ಶರಣಾಗತಿ ಲಕ್ಷಣಗಳನ್ನು ನಿರೂಪಿಸಿ ಅವುಗಳಿಗೆ ಸಿದ್ಧಾಂತದ ರೂಪಕೊಟ್ಟು ಚೇತನ -- ಪ್ರಪನ್ನರಿಗೆ ಮಾರ್ಗದರ್ಶನ ನೀಡಿದ್ದಾರೆ ತಮಿಳು ದಿವ್ಯ ಪ್ರಬಂಧಗಳಿಗೆ ಶ್ರುತಿಯ ಸ್ಥಾನವನ್ನು ಕೊಟ್ಟು ಎರಡೂ ಸಮವೆಂದು ಘೋಷಿಸಿರುತ್ತಾರ ಇದರಿಂದಾಗಿ ದೇಶಿಕರ ಕೃತಿಗಳು ಉಬಯ ವೇದಗಳ ಸಂಗಮವಾಗಿದೆ 'ರಹಸ್ಯತ್ರಯಸಾರ' ಇವರ masterpiece ಕೃತಿ ೮೦ ರ ವೃದ್ಧಾಪ್ಯದಲ್ಲಿ ತಮ್ಮಲ್ಲಿರುವ ಪರಿಪಕ್ವ ಹಾಗೂ ಪರಿಪೂರ್ಣ ಜ್ಞಾನವನ್ನು ಈ ಅಮೋಘ ಕೃತಿಯಲ್ಲಿ ತುಂಬಿರುತ್ತಾರೆ ಆಗ ಅವರಿಗೆ ಆಧ್ಯಾತ್ಮ ವಿಚಾರಗಳಲ್ಲಿ ವಿಶಾಲವಾದ ಅನುಭವವಿತ್ತು ಈ ಬೃಹದ್ಗ್ರಂದದಲ್ಲಿ ಒಟ್ಟು ೩೨ ಅದಿಕರಣಗಳಿವೆ ಎಲ್ಲರಿಗೂ ಇದು ಸುಲಬವಾಗಿ ಗ್ರಾಹ್ಯವಾಗಲು 'ರಹಸ್ಯತ್ರಯ ಚುಳಕ' ಎಂಬ ಅತಿ ಸಂಗ್ರಹವಾದ ಕೃತಿಯನ್ನೂ ರಚಿಸಿರುತ್ತಾರೆ ಅವರು ಇಂದು ಕಣ್ಮರೆಯಾದರೂ ಕೃತಿಗಳಲ್ಲಿ ಜೀವಂತವಾಗಿದ್ದಾರೆ

ವಾದ ದಿಗ್ವಿಜಯ -- ಬಿರುದಾವಳಿ -- ಸಿದ್ಧಾಂತದ ಪರಿಷ್ಕರಣವನ್ನೇ ಮನಸ್ಸಿನಲ್ಲಿಟ್ಟುಕೊಂಡು ತಮ್ಮ ವಾದದ ಗುರಿಯನ್ನು ಖಚಿತಪಡಿಸಿಕೊಂಡರು ಇತರ ಮತಗಳನ್ನು ದ್ವೇಷಿಸದೆ ಚೆನ್ನಾಗಿ ಅಧ್ಯಯನ ಮಾಡಿದ್ದರು. ಉತ್ತರ ಮೀಮಾಂಸ ಮತ್ತು ಶ್ರೀ ಬಾಷ್ಯದಲ್ಲಿ ಪ್ರಕಾಂಡ ಪಾಂಡಿತ್ಯ ವಿದ್ದುದರಿಂದ ವಿಶಿಷ್ಟಾದ್ವೈತ ಮತದ ವಿರುದ್ಧ ಯಾವುದೇ ಸವಾಲು ಎರಗಿದರೂ ದಿಟ್ಟತನದಿಂದ ಎದುರಿಸುತ್ತಿದ್ದರು -- ಮತ್ತು ಪ್ರತಿಸ್ಪರ್ದಿಗಳನ್ನು ನಿರಾಯಾಸವಾಗಿ ಜಯಿಸುತ್ತಿದ್ದರು ಸೋಲೊಪ್ಪಿ ಶ್ರೀ ವೈಷ್ಣವ ಮತವನ್ನು ಸೇರಿದವರ ಪೈಕಿ ಕಾಶಿಯ ಅದ್ವೈತ ಪಂಡಿತರೂ ಒಬ್ಬರು ಕ್ರಮೇಣ ಇವರು ದ್ವಿತೀಯ ಬ್ರಹ್ಮತಂತ್ರ ಸ್ವಾಮಿಗಳಾದರು (ಇಂದಿನ ಪರಕಾಲಮಠ) ದೇಶಿಕರ ಪ್ರೌಢಿಮೆಯನ್ನು ಕುರಿತು ಹಿರಿಯ ಸಮಕಾಲೀನರಾದ ಪಿಳ್ಳೈ ಲೋಕಾಚಾರ್ಯ ವಿದ್ಯಾರಣ್ಯರೂ, ಅಕ್ಷೋಭ್ಯತೀರ್ಥರೂ ತಂತಮ್ಮ ಗ್ರಂದಗಳಲ್ಲಿ ದೇಶಿಕರ ಕೃತಿಗಳನ್ನು ಉಲ್ಲೇಖಿಸಿರುತ್ತಾರ ವಾದ ವಿವಾದಗಳ ಇತ್ಯರ್ಥಕ್ಕಾಗಿ ತೀರ್ಪುಕೊಡಲು ದೇಶಿಕರಿಗೆ ಆಹ್ವಾನಗಳು ಮೇಲಿಂದ ಮೇಲ ಬರುತ್ತಿದ್ದವು

ಪಾದುಕಾಸಹಸ್ರರಚನೆ -- ವಾದದಲ್ಲಾಗಲಿ, ಕವಿತಾ ಸಾಮರ್ಥ್ಯದಲ್ಲಾಗಲಿ ದೇಶಿಕರನ್ನು ಸೋಲಿಸಿ ಅವಮಾನ ಮಾಡಲೇಬೇಕೆಂದು ಪಣತೊಟ್ಟವರಲ್ಲಿ ಲೋಕಾಚಾರ್ಯ ಸೋದರರಾದ ಅಳಹಿಯ ಮನವಾಳ ಪೆರುಮಾಳ್ ನಾಯನಾರರೂ ಒಬ್ಬರು ಒಂದು ರಾತ್ರಿಯ ಅವದಿಯಲ್ಲಿ ಹೆಚ್ಚು ಶ್ಲೋಕಗಳನ್ನು ರಚಿಸುವ ಆಶು ಕವಿತಾಸ್ಪರ್ದೆಯನ್ನು ಏರ್ಪಡಿಸಿದರು ಕುತಂತ್ರಿಗಳ ಜಾಡು ತಿಳಿದ ದೇಶಿಕರು 'ನಮ್ಮೊಳಗೆ ಕಲಹ ಸಾದುವಲ್ಲ' ಎಂದು ಹೇಳಿ ಜಾರಿಕೊಂಡಿದ್ದರು ವಿಷಯ ಶ್ರೀರಂಗನ ಪಾದಗಳು ಎಂದು ತಿಳಿಯಿತು ಮತ್ತು 'ಹೇಡಿ' ಎಂಬ ಪದ ಕಿವಿಗೆ ಬಿದ್ದೊಡನೆಯೇ ಸ್ಪರ್ದೆಗೆ ಒಪ್ಪಿಕೊಂಡರು ೧೦೦೮ ಶ್ಲೋಕಗಳ 'ಪಾದುಕಾ ಸಹಸ್ರ'ವನ್ನು ರಚಿಸಿ ಜಯಗಳಿಸಿದರೂ, ಭಾಗವತಪಚಾರಕ್ಕೆ ಹೆದರಿ ತಮ್ಮ ಕೃತಿಗಿಂತ ಪ್ರತಿಸ್ಪರ್ದಿಯ ೩೦೦ ಶ್ಲೋಕಗಳ 'ಪದಕಮಲಸಹಸ್ರ'ವೇ ಅತ್ಯುತ್ತಮವೆಂದು ಘೋಷಿಸಿದರು ಇದಕ್ಕೆ ಹಂದಿ ಮತ್ತು ಆನೆಯ ಸಂತಾನದ ಉದಾಹರಣೆಯನ್ನು ಕೊಟ್ಟರು ಮಹಾತ್ಮರು ತುಂಬಿದ ಸಭೆಯಲ್ಲಿ ಅರ್ಚಕ ಮುಖೇನ 'ವೇದಾಂತಾಚಾರ್ಯ' ಎಂಬ ಬಿರುದನ್ನು ಶ್ರೀರಂಗನಾದನೂ, 'ಸರ್ವತಂತ್ರ ಸ್ವತಂತ್ರ' ಎಂದು ರಂಗನಾಯಕಿತಾಯಾರೂ ಘೋಷಿಸಿದರು ಆಚಾರ್ಯರ ವಾಕ್ಕು ಫಲಿಸಿತು ಎಂದು ಸಂತಸಗೊಂಡು ಮನಸ್ಸಿನಲ್ಲೇ ಗುರುವನ್ನು ನಮಿಸಿದರು ದೊಡ್ಡಯ್ಯಾಚಾರ್ಯರು 'ಕವಿಕದಕಮೃಗೇಂದ್ರ' ಎಂದೂ, ದೇಶಿಕರು ತಮ್ಮ ಕೃತಿಗಳಾದ ಸಂಕಲ್ಪಸೂರ್ಯೋದಯ ಅದಿಕರಣ ಸಾರಾವಳಿಯಲ್ಲಿ ಬಿರುದುಗಳನ್ನು ಉಲ್ಲೇಖಿಸಿರುತ್ತಾರೆ 'ಕವಿತಾರ್ಕಿಕಸಿಂಹಸ್ಯ' ಎಂದು ಅಪ್ಪಯ್ಯ ದೀಕ್ಷಿತರು ಕೊಂಡಾಡಿದರು ಯಾದವಾಭ್ಯುದಯ ಮತ್ತು ಸಂಕಲ್ಪ ಸೂರ್ಯೋದಯ ಕೃತಿಯಿಂದ 'ಕವಿಸಿಂಹ', 'ಕವಿಕದಕ ಕಂಠೀರವ' ಎಂದೂ ಬೇರೆ ಮತಗಳ ಅಧ್ಯಯನ ವಿಶ್ಲೇಷಣೆಗಳನ್ನು ಮಾಡಿ ಸ್ವಮತ ಸಿದ್ಧಾಂತವನ್ನು ಎತ್ತಿ ಹಿಡಿದಿದ್ದರಿಂದ 'ತಾರ್ಕಿಕಸಿಂಹ' ಎಂದೂ, ಶ್ರುತಿ -- ಪ್ರಬಂದಗಳ ಸಾಮ್ಯವನ್ನು ನಿರೂಪಿಸಿದ್ದರಿಂದ 'ಉಭಯ ವೇದಾಂತಾಚಾರ್ಯ' ಎಂದೂ, ಗುಣಮಣಿವರರೂ ಬ್ರಹ್ಮನಿಷ್ಠರು, ದ್ರಾಮಿಡಾಮ್ನಾಯ ಶಿಖಾಮಣಿ, ಜ್ಞಾನ ಭಕ್ತಿ

ವೈರಾಗ್ಯ ಸಂಪನ್ನರು, ತಪಸ್ವಿಗಳು, ಗೃಹಸ್ಥಾಶ್ರಮದ ಶಕರು ಅವತಾರ ವಿಶೇಷರು ನಿಗಮಾಂತ ಮಹಾದೇಶಿಕ ಇನ್ನೂ ಮುಂತಾದ ಬಿರುದಾವಳಿ ಅವರ ಸಮಕಾಲೀನ ಮತ್ತು ನಂತರ ಬಂದ ಪಂಡಿತೋತ್ತಮರು, ವ್ಯಾಖ್ಯಾನಕಾರರುಗಳಿಂದ ಬಂದಿರುತ್ತೆ 'ಹಾಮಕಾಸಪಸ್' ಪ್ರಸಂಗ ಎಲ್ಲೆಲ್ಲೂ ಕಾಳ್ಗಿಚ್ಚಿನಂತೆ ಹರಡಿ ದೇಶಿಕರ ಖ್ಯಾತಿ ಹಿಮಾಲಯಕ್ಕೇರಿತು ಇಂದಹವರು ರಾಜಾಸ್ಥಾನದಲ್ಲಿದ್ದರೆ ಶೋಬಿಸುವುದೆಂದು ಭಾವಿಸಿ ವಿದ್ಯಾರಣ್ಯರು ದೇಶಿಕರಿಗೆ ಬುಕ್ಕರಾಯನ ಆಸ್ಥಾನದಲ್ಲಿ ಗೌರವ ಸ್ಥಾನವನ್ನು ಕೊಡಲು ಆಹ್ವಾನ ಕಳುಹಿಸಿದರು 'ಹೊಟ್ಟೆ ಪಾಡಿಗಾಗಿ ದೊರೆಯನ್ನು ಆಶ್ರಯಿಸಿ ಸ್ತೋತ್ರಾದಿಗಳಿಂದ ಉಬ್ಬಿಸಿ ಮೆಚ್ಚುಗೆ ಪಡೆಯುವವರನ್ನು ಮೆಚ್ಚಲಾರೆ ಒಂದು ಹಿಡಿ ಅವಲಕ್ಕಿ ಕೊಟ್ಟ ಕುಚೇಲನಿಗೆ ಮಹದೈಶ್ವರ್ಯಗಳನ್ನು ದಯಪಾಲಿಸಿದ ಪ್ರಭುವನ್ನು ಮಾತ್ರ ನಾನು ಮೆಚ್ಚುವೆನು' ಎಂದು ಹೇಳಿ ದೇಶಿಕರು ಆಹ್ವಾನವನ್ನು ನಿರಾಕರಿಸಿ 'ವೈರಾಗ್ಯ ಪಂಚಕ' ಕೃತಿಯನ್ನು ಉತ್ತರ ಪತ್ರಮೊಂದಿಗೆ ಕಳುಹಿಸಿದರು ಖ್ಯಾತಿ ಲಾಭಗಳಿಗಂದೂ ಆಸೆ ಪಟ್ಟವರಲ್ಲ-ತಮ್ಮ ಪಿತುವು ಎಂದು ನಯನರಾಚಾರ್ಯರು ಪ್ರಕಟಿಸಿದ್ದಾರೆ 'ಯಃ ಖ್ಯಾತಿ ಲಾಭ ಪೂಜಾಸುದಿಮುಖೋ ವೈಷ್ಣವೇ ಜನೆ' ಇಹದ ಶ್ರೀಮಂತಿಕೆಯನ್ನು ಬದಿಗೊತ್ತಿ ಸರಳವಾದ ಜೀವನವನ್ನೇ ನಡೆಸುತ್ತಾ ಸದಾಚಾರ್ಯ ನಿಷ್ಠರಾಗಿದ್ದರು ಬಡತನದ ಬಾಳನ್ನೇ ಪುರಸ್ಕಾರವಾಗಿ ಆರಿಸಿಕೊಂಡರು ತಮ್ಮದೈನಂದಿನ 'ಭಿಕ್ಷಾಂದೇಹಿ' ಕಾರ್ಯದಲ್ಲಿ ಪರಮ ಭಕ್ತರೊಬ್ಬರು ದಾನ್ಯದ ಜೊತೆಯಲ್ಲಿ ಚಿನ್ನದ ನಾಣ್ಯ ಒಂದನ್ನು ಹಾಕಿದ್ದರು 'ಈ ಕ್ರಿಮಿ ಕೀಟವನ್ನು ಆಚೆ ಎಸೆ' ಎಂದು ಹೇಳಿ 'ನಾವು ಉಪಯೋಗಿಸುವ ಪದಾರ್ಥಗಳು ಕಳ್ಳನಿಗೂ ದೇಡವಾಗಿರುವಂತಹವಾಗಿರಬೇಕು' ಎಂದು ಪತ್ನಿಗೆ ಬೋಧಿಸುತ್ತಾರ ದೇವರ ನೈವೇದ್ಯಕ್ಕಾಗಿ ಸಾತ್ವಿಕ ಆಹಾರ ಸಾಮಗ್ರಿಗಳನ್ನೇ ಉಪಯೋಗಿಸುತ್ತಿದ್ದರು ರಜತಮೋಗುಣ ವೃದ್ಧಿಯಾಗುವ ಆಹಾರವನ್ನು ಸಂಪೂರ್ಣವಾಗಿ ವರ್ಜಿಸಿದ್ದರು (ಕೃತಿ -- 'ಆಹಾರನಿಯಮ')

ದೇಶಿಕರ ವಿರುದ್ಧ ಟೀಕೆ ಟಿಪ್ಪಣಿಗಳು, ಕಟ್ಟುಕತೆಗಳು ಹಂಟಾವತಾರ ಪ್ರಸಂಗದಿಂದಲೇ ಚಿಗುರಿ ಹೆಮ್ಮರವಾಯಿತು ಅವಮಾನ ಅಪಕೀರ್ತಿಗೊಳಿಸಲು ಸರ್ವಪ್ರಯತ್ನ ನಡೆಯುತ್ತಿತ್ತು ಒಮ್ಮೆ ದೇಶಿಕರ ಮನೆಯ ಸೂರಿಗೆ ಚಪ್ಪಲಿಹಾರವನ್ನು ತೋರಣದ ರೀತಿಯಲ್ಲಿ ಹಾಕಿ ದೇಶಿಕರಿಗೆ ಅದು ತಗುಲಬೇಕೆಂದು ಉದ್ದೇಶಿಸಿದ್ದರು ಭಾಗವತಾರಾದನೆಯನ್ನೇ ಅವಲಂಬಿಸಿದ ವಿನಯಶೀಲ ದೇಶಿಕರು 'ಭಗವಂತನ ಚರಣಗಳನ್ನು ನಂಬಿದವರಿಗೆ ಬಾಗವತರ ಪಾದರಕ್ಷೆಯೇ ಆಧಾರ' ಎಂದು ಉತ್ತರಿಸಿದ್ದು ಎಲ್ಲರನ್ನೂ ಚಕಿತಗೊಳಿಸಿತು ಉರಿ ಆರಲಿಲ್ಲ ಇನ್ನೂ ಹಬ್ಬಿತು ದೇಶಿಕರು ಮನೆ ಜಗಲಿಯ ಮೇಲ ವಿಹರಿಸಿಕೊಳ್ಳುತ್ತಿದ್ದಾಗ ತಿಳಿಗೇಡಿಗಳು ಅವರನ್ನು ಎಳೆದು ನೂಕಿ ಗಾಯ ಗೊಳಿಸಿದರು ಇಂದವರ ಪೈಕಿ ಲಕ್ಷ್ಮಣಾಚಾರ್ಯರೆಂಬುವವರೊಬ್ಬರು, ದೇಶಿಕರ ಅಂತಿಮ ಕಾಲದಲ್ಲಿ ಶರಣಾಗಿ ಪೂರ್ವಕೃತ್ಯವನ್ನು ಮನ್ನಿಸಲು ಪ್ರಾರ್ದಿಸಿದರು ದೇಶಿಕರು ಪಿತೃಕೈಂಕರ್ಯಕ್ಕಾಗಿ ಮೂರು ಜನ ಬ್ರಾಹ್ಮಣರನ್ನು ಪ್ರಾರ್ದಿಸಿದ್ದರು ವಿರೋದಿಗಳು ಇವರನ್ನು ಬಾರದಂತೆ ಮಾಡಿದ್ದರು ವಿಷಯ ತಿಳಿದ ದೇಶಿಕರು ದೈವವನ್ನು ಪ್ರಾರ್ದಿಸಿದರು ಶ್ರೀರಂಗ, ತಿರುಪತಿ ಮತ್ತು ಕಂಚಿಯ ದೈವಗಳು ದ್ವಿಜರೂಪದಲ್ಲಿ ಬಂದು ಕೈಂಕರ್ಯವನ್ನು ನಡೆಸಿಕೊಟ್ಟರು ಭಕ್ತಿ ಆದಾರಿತವಾದ ಪವಾಡ ಶಕ್ತಿಯಿಂದಲೇ ಅನೇಕ ವಿಷಮ ಪರೀಕ್ಷೆಗಳನ್ನು ಸವಾಲುಗಳನ್ನೂ ಸಹನೆಯಿಂದಲೂ ಘನತೆಗಾಂಭೀರ್ಯದಿಂದಲೂ ಎದುರಿಸಿದರು 'ನಿಮಗೆ ಶಕ್ತಿಯಿದ್ದರೆ ರಕ್ಷಿಸಿಕೊಳ್ಳಿ' ಎಂದು ಹಾವಾಡಿಗನೊಬ್ಬ ದೇಶಿಕರ ಮುಂದೆ ಹಾವನ್ನು ಎಸೆದಾಗ, ದೇಶಿಕರು 'ಗರುಡದಂಡಕ'ವನ್ನು ಪಠಿಸಿದರು ಗರುಡ ಪಕ್ಷಿಯೊಂದು ಹಾವನ್ನು ಹಿಡಿದು ಹಾರಿತು ಹಾವಾಡಿಗನು ಕ್ಷಮೆ ಬೇಡಿದನು ಮಂತ್ರವಾದಿಯೊಬ್ಬನೂ ಸೋಲೊಪ್ಪಿದ ಹೀಗೆಯೇ ಶಿಲ್ಪಿಯೊಬ್ಬ 'ನೀವು ಸರ್ವತಂತ್ರಸ್ವತಂತ್ರರೋ? ಹಾಗಾದರೆ ನಿಮ್ಮ ವಿಗ್ರಹವನ್ನು ನೀವೇ ಸೃಷ್ಟಿಸಿ' ಎಂದು ಸವಾಲು ಹಾಕಿದ ದೇಶಿಕರು ತಮ್ಮ ವಿಗ್ರಹವನ್ನು ತಾವೇ ಕಡೆದು 'ಶಿಲ್ಪಶಾಸ್ತ್ರ'ವೆಂಬ ಗ್ರಂಥವನ್ನು ರಚಿಸಿದರು ಹೀಗೆಯೇ ಭಾವಿ ತೋಡುವ ಸವಾಲನ್ನು

ಎದುರಿಸಿದರು ಈ ಎರಡು ಆಸ್ತಿಗಳು ತಿರುವ ಹೀಂದ್ರ ಪುರದಲ್ಲಿವೆ

ಮ್ಲೇಚ್ಛರ ಹಾವಳಿಗೆ ಶ್ರೀರಂಗ ತುತ್ತಾದಾಗ ಶವದ ರಾಶಿಯಲ್ಲಿ ತಾವೂ ಶವದಂತ ವರ್ತಿಸಿ ಇಬ್ಬರು ಭಾಗವತರನ್ನೂ 'ಶ್ರುತಪ್ರಕಾಶಿಕ' ಎಂಬ ಅಮೂಲ್ಯಗ್ರಂಥವನ್ನೂ ಕಾಪಾಡಿದರು -- 'ಶ್ರುತಪ್ರ ಕಾಶಕೋ ಬೂಮೌ ಯೇ ನಾಮೋಪರಿರಕ್ಷಿತ" ಶ್ರೀರಂಗನಾದ ಮೂರ್ತಿಯನ್ನು ಮಲ್ಲಿಕ್‌ಕಾಪರನ ಲೂಟಿಯಿಂದ ತಪ್ಪಿಸಿ ತಿರುಪತಿಗೆ ಸ್ಥಳಾಂತರಿಸಲು ಲೋಕಾಚಾರ್ಯರ ಜೊತೆ ಹಗಲಿರುಳೂ ದುಡಿದರು

ಅವತಾರಸಮಾಪ್ತಿ -- ಸಾದು ಸಂತರರಿಗೆ, ಆಚಾರ್ಯ ಪೀಠಕ್ಕೆ ಬಂದ ಕಿರಿಯ ಅದಿಪತಿಗಳಿಗೆ ದೇಶಿಕರು ಆದರ್ಶಪ್ರಾಯರಾಗಿದ್ದರು ಉತ್ತರ ಭಾರತದ ನಾನಾ ತೀರ್ಥಕ್ಷೇತ್ರಗಳಲ್ಲಿ ಪಂಡಾ, ಬೈರಾಗಿಗಳು ಮತ್ತು ಸನ್ಯಾಸಿಗಳನ್ನು ಅವರ ಸ್ವರೂಪ, ಸಂಪ್ರದಾಯ ದಿನಚರಿಗಳನ್ನು ಕಂಡು ದೇಶಿಕರು ವಿಸ್ಮಿತರಾಗಿದ್ದಲ್ಲದೇ ಅಲ್ಲಿದ್ದ ಅನಾಚಾರಗಳನ್ನು ಕಂಡು ನೊಂದು ದಕ್ಷಿಣ ಬಾರತವೇ ಮೇಲು ಎಂದು ಭಾವಿಸಿ ಪ್ರವಾಸವನ್ನು ಮೊಟಕುಗೊಳಿಸಿ ಕರ್ನಾಟಕದ ಸತ್ಯಾಗಾಲ ಮತ್ತು ಮೇಲು ಕೋಟೆಗಳಲ್ಲಿ ಹಲವಾರು ವರ್ಷಗಳು ತಂಗಿದ್ದು ನಂತರ ಶ್ರೀರಂಗಾಬಿಮುಖವಾಗಿ ಪ್ರಯಾಣ ಬೆಳಸಿದರು ಸತ್ಯಮಂಗಲದಲ್ಲಿ ಬಿಡಾರ ಮಾಡಿದರು ತಮ್ಮ ಅಂತಿಮ ಕರೆಯೂ ಭಗವತ್ಸಂಕಲ್ಪಾನುಸಾರವಾಗಿದೆಯೆಂದು ಪರಮಾನಂದ ಭರಿತರಾದರು ಅಂತಿಮ ಸಮಯದಲ್ಲಿ ಪುತ್ರಕುಮಾರ ವರದನಾದರು ಬ್ರಹ್ಮತಂತ್ರ ಸ್ವಾಮಿಗಳೂ ಅಂತರಂಗ ಶಿಷ್ಯರಾದ ತಿರುಮಲೈ ಶ್ರೀನಿವಾಸಾಚಾರ್ಯ, ಕಂದಾಡೆ ಎಂಬಾರ್ ಸ್ವಾಮಿಗಳು, ಪ್ರಮುಖ ಶಿಷ್ಯ ಪ್ರಶಿಷ್ಯರೂ ದೇಶಿಕರ ಬಳಿ ಇದ್ದರು ಭಗವದಿಚ್ಛೆಯಂತೆ ನವೆಂಬರ್ ೧೪, ೧೩೬೯ ರಂದು ಶ್ರೀರಂಗನಾದನ ಪಾದಗಳನ್ನು ಸೇರಿದರು

ಅಪಾರ ಕೊಡುಗೆ -- ಬ್ರಹ್ಮಸೂತ್ರ ಉಪನಿಷತ್ತುಗಳನ್ನೇ ಅವಲಂಬಿಸಿ ಹೊರಟ ಸಿದ್ಧಾಂತಗಳ ಪೈಕಿ ರಾಮಾನುಜ ಸಿದ್ಧಾಂತವೂ ಒಂದು ವ್ಯಾಖ್ಯಾನದಿಂದಲೂ ಗ್ರಂದರಚನೆ ಹಾಗೂ ಉಪದೇಶದಿಂದಲೂ ಸಿದ್ಧಾಂತಕ್ಕೆ ಬೆಂಬಲ ಕೊಟ್ಟಿದ್ದಾರೆ ದರ್ಮಪ್ರಚಾರಕ್ಕೂ ಸಿದ್ಧಾಂತ ಸ್ಥಾಪನೆಗೂ ದೇಶಿಕರು ಮಾಡಿರುವ ಸೇವೆ ಅತ್ಯಮೋಘವಾದುದು ಇದಕ್ಕಾಗಿಯೇ ಅವರು ತಮ್ಮ ಇಡಿ ೧೦೦ ವರ್ಷ ಜೀವನವನ್ನು ಮುಡಿಪಾಗಿಟ್ಟಿದ್ದಾರ ವಿಶಿಷ್ಟಾದ್ವೈತ ವೇದಾಂತದ' ನಬೋಮಂಡಲದಲ್ಲಿ ದೇಶಿಕರು ಉಜ್ವಲತಾರೆ, ಮತ್ತೊಂದು ದೃಷ್ಟಿಕೋನದಲ್ಲಿ ದೇಶಿಕರು ರಾಮಾನುಜದರ್ಶನ ಮತ್ತು ಶ್ರೀ ವೈಷ್ಣವ ಸಂಪ್ರದಾಯದ ಪ್ರತಿನಿಧಿ ವಡಗಲೈ ಸಂಪ್ರದಾಯ ದೇಶಿಕ ಸಂಪ್ರದಾಯ ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ ಇವರಲ್ಲಿ ಮುನಿತ್ರಯ, ಮನ್ನಾರ್ -- ಕೋಳಪ್ಪರ್ ಪದ್ಧತಿಗಳೂ ದರತಿವೆ ಈ ಸಂಪ್ರದಾಯದಲ್ಲಿ 'ಘಂಟಾವತಾರ' ಪ್ರಸಂಗ ಒಂದು ಮುಖ್ಯ ಘಟ್ಟ. ಈ ಸಂಪ್ರದಾಯವನ್ನು ತಾವು ಜೀವಿತವಾಗಿರುವಾಗಲೇ ಕಾರ್ಯರೂಪಕ್ಕೆ ತಂದರು

ವಿಶಿಷ್ಟಾದ್ವೈತ ಪರಿಷ್ಕರಣ, ಶ್ರೀವೈಷ್ಣವ ದರ್ಮನಿರೂಪಣೆಯಲ್ಲಿ ದೇಶಿಕರ ಸ್ಥಾನ ಅತ್ಯಂತ ಹಿರಿದಾದ್ದು ದೇಶಿಕರ ಅಮೂಲ್ಯ ಕೊಡುಗೆ ಅಪಾರವಾದ್ದು

a) ಆಳ್ವಾರರ ಪರಂಪರೆಯನ್ನು ಆಚಾರ್ಯ ಪರಂಪರೆಯನ್ನು ಒಟ್ಟುಗೂಡಿಸಿ ರಾಮಾನುಜ ದರ್ಶನವೇ ವಿಶಿಷ್ಟಾದ್ವೈತ ಸಿದ್ಧಾಂತವೆಂದು ಘೋಷಿಸಿ ಸಂಸ್ಕೃತದ್ರಾವಿಡ ವೇದಗಳ ಸಮ್ಮಿಲನವೇ ಉಭಯ ವೇದಾಂತವೆಂದು ಸಾರಿದರು

b) ಉಭಯ ವೇದಾಂತದಲ್ಲಿ ಪ್ರವತ್ತಿ ಶಾಸ್ತ್ರಕ್ಕೆ ಆದ್ಯತೆ ಕೊಟ್ಟ ಕೀರ್ತಿ ಇವರಿಗೇ ಸಲ್ಲುವುದು

c) ಬ್ರಹ್ಮತಂತ್ರ ಸ್ವತಂತ್ರಮಠಸ್ಥಾಪನೆ ಮತ್ತು ರಾಮಾನುಜಾದಿಗಳಿಂದ ದತ್ತವಾದ ಲಕ್ಷ್ಮಿ ಹಯಗ್ರೀವ ಸ್ವಾಮಿಯನ್ನು ಶ್ರೀಮಠ (ಇಂದಿನ ಪರಕಾಲಮಠ) ದಲ್ಲಿ ಪ್ರತಿಷ್ಠಾಪಿಸಿದ್ದು

d) ಮಠಾಶ್ರಮಗಳಲ್ಲಿ ದಿವ್ಯಕ್ಷೇತ್ರಗಳಲ್ಲಿ ಉಭಯ ವೇದಗಳ ಚರ್ಚೆ ಸದಸ್ಸು ಉಪನ್ಯಾಸ ಸ್ತೋತ್ರ ಸ್ಪರ್ಧೆ ವ್ಯವಸ್ಥೆ ಕ್ರಮೇಣ ಇದಕ್ಕಾಗಿಯೇ ಅನೇಕ ಸಭಾ ಸಂಸ್ಥೆಗಳು ಸಂಘಗಳು ಹುಟ್ಟಿಕೊಂಡವು. ಉದಾ ಉಭಯವೇದಾಂತ ಸಭಾ ವೇದಾಂತ ದೇಶಿಕ ವಿಹಾರ, ವಿದ್ವತ್ ಸಬಾ ಇತ್ಯಾದಿ

d) ಶ್ರೀ ವೈಷ್ಣವ ಸಿದ್ಧಾಂತ ಎಲ್ಲರಿಗೂ ಸುಲಬವಾಗಿ ತಿಳಿಯಲು ಶ್ರಮಿಸಿದರು

ವಿದ್ಯೆಗೆ ವಿವೇಕಕ್ಕೆ ವಿರಕ್ತಿಗೆ ದಯಾದಾಕ್ಷಿಣ್ಯಕ್ಕೆ ಮಾನವ ಗುಣಸಂಪತ್ತಿಗೆ ಆದ್ಯತೆಕೊಟ್ಟು ಆದರ್ಶ ಭಾಗವತೋತ್ತಮರಾದ ದೇಶಿಕರು ಒಬ್ಬ ಅಮಾನುಷ ಶಕ್ತಿಯ ದಿವ್ಯ ಪುರುಷರೆಂದು ಲೋಕಕ್ಕೆ ತಿಳಿಯಿತು ಬಾರತೀಯ ಸಂಸ್ಕೃತಿಯಲ್ಲಿ ಜ್ಞಾನ ಬಕ್ತಿ ವೈರಾಗ್ಯ ನಿಷ್ಕಾಮ ಕರ್ಮ ಪ್ರವೃತ್ತಿಗಳನ್ನೆಲ್ಲಾ ಬಗವದರ್ಪಣೆಮಾಡಿ ಕೃತಕೃತ್ಯರಾದ ದೇಶಿಕ ರಂಬಾ ಮಹಾನುಬಾವರನ್ನು ನ ಬೂತೋ ನ ಬವಿಷ್ಯತಿ ಎಂಬಂತೆ ಇನ್ನು ಮುಂದೆ ನೋಡುವುದು ಅಸಂಭವ



## ಶ್ರೀ ಗೋವಿಂದರಾಜಸ್ವಾಮಿ ದೇವಾಲಯ, ತಿರುಪತಿ

### ದರ್ಶನ ಹಾಗೂ ಸೇವಾ ವಿವರಗಳು

| | ರಿಂದ | ವರೆಗ |
|---|---|---|
| ಸುಪ್ರಭಾತ | ಪ್ರಾ ೫ ೦೦ | ಪ್ರಾ ೫ ೩೦ |
| ವಿಶ್ವರೂಪ ಸರ್ವದರ್ಶನ* | ಪ್ರಾ ೫ ೩೦ | ಪ್ರಾ ೭ ೦೦ |
| ತೋಮಾಲ ಸೇವೆ (ಆರ್ಜಿತ) | ಪ್ರಾ ೭ ೩೦ | ಪ್ರಾ ೮ ೦೦ |
| ಅರ್ಚನೆ (ಆರ್ಜಿತ) | ಪ್ರಾ ೮ ೦೦ | ಪ್ರಾ ೮ ೩೦ |
| ಸರ್ವದರ್ಶನ | ಪ್ರಾ ೯ ೦೦ | ಮ ೧೨ ೩೦ |
| | ಮ ೧ ೦೦ | ಸಂ ೬ ೩೦ |
| | ರಾ ೭ ೦೦ | ರಾ ೮ ೪೫ |
| ಏಕಾಂತಸೇವೆ | | ರಾ ೯ ೦೦ಕ್ಕೆ |

* ಶುಕ್ರವಾರ ಏಕಾದಶಿ ಉತ್ತರಾನಕ್ಷತ್ರದ ದಿನ ಮತ್ತಿತರ ಹಬ್ಬ ಹರಿದಿನಗಳಲ್ಲಿ ವಿಶ್ವರೂಪ ಸರ್ವದರ್ಶನವು ಪ್ರಾ ೫ ೩೦ ರಿಂದ ಪ್ರಾ ೬ ೩೦ ರ ವರೆಗ ಮಾತ್ರ

### ಆರ್ಜಿತ ಸೇವೆಗಳು

| | | |
|---|---|---|
| ೧ | ಗರುಡವಾಹನ | ೩೨ ೦೦ |
| ೨ | ಚಂದ್ರಪ್ರಭ ವಾಹನ | ೩೨ ೦೦ |
| ೩ | ಗಜವಾಹನ | ೩೨ ೦೦ |
| ೪ | ಅಶ್ವವಾಹನ | ೩೨ ೦೦ |
| ೫ | ಸಿಂಹವಾಹನ | ೩೨ ೦೦ |
| ೬ | ಹಂಸವಾಹನ | ೩೨ ೦೦ |
| ೭ | ಚಿಕ್ಕಶೇಷವಾಹನ | ೩೨ ೦೦ |
| ೮ | ದೊಡ್ಡ ಶೇಷವಾಹನ | ೬೨ ೦೦ |
| ೯ | ಸೂರ್ಯಪ್ರಭವಾಹನ | ೬೨ ೦೦ |

### ಪಡಿಪ್ರಸಾದಗಳು

| | | |
|---|---|---|
| ೧ | ದೋಸೆ, ಕಾಲಸೋಲ | ೩೫ ೦೦ |
| ೨ | ದಧ್ಯೋದನ | ೪೦ ೦೦ |
| ೩ | ಪುಳಿಯೋಗರೆ ' | ೫೦ ೦೦ |
| ೪ | ಪೊಂಗಲು " | ೫೫ ೦೦ |
| ೫ | ಸಕ್ಕರೆಪೊಂಗಲ್ ' | ೬೫ ೦೦ |
| ೬ | ಶಾಕರ ಭಾತ್ " | ೮೫ ೦೦ |
| ೭ | ಕೇಸರಿಭಾತ್ " | ೯೦ ೦೦ |
| ೮ | ಸೀರ " | ೧೫೫ ೦೦ |

ವಿವರಗಳಿಗೆ
**ಪೇಷ್ಕಾರ್**
ಶ್ರೀ ಗೋವಿಂದರಾಜಸ್ವಾಮಿ ದೇವಾಲಯ
ತಿರುಪತಿ

## ತಿರುಮಲೆ ತಿರುಪತಿ ದೇವಸ್ಥಾನಗಳು --- ತಿರುಪತಿ

# ತಿರುಮಲೆಯಲ್ಲಿ ವಸತಿಗಾಗಿ ದಾನಯೋಜನೆ

"ಸ್ವಲ್ಪವೇ ಸಂಪದವನ್ನು ನೀಡಿರಿ, ದೈವಿಕ ಫಲವನ್ನು ಪಡೆಯಿರಿ"

ಶ್ರೀ ವೆಂಕಟೇಶ್ವರಸ್ವಾಮಿ ಸನ್ನಿಧಿಯಾದ ತಿರುಮಲೆ ಕಲಿಯುಗ ವೈಕುಂಠವಾಗಿದ್ದು, ದಿನವೂ ಸಹಸ್ರಾರು ಮಂದಿ ಯಾತ್ರಿಕರು ಸ್ವಾಮಿ ದರ್ಶನಕ್ಕಾಗಿ ಆಗಮಿಸುತ್ತಾರೆ ದಿನದಿನವೂ ಹೆಚ್ಚುತ್ತಿರುವ ಯಾತ್ರಿಕ ಸಂದಣಿಯ ವಸತಿ ಸೌಲಭ್ಯಗಳ ಏರ್ಪಾಡಿಗಾಗಿ ತಿ ತಿ ದೇ ಗಳು ಸುಸಜ್ಜಿತ ಅತಿಥಿಗೃಹಗಳನ್ನೂ, ಈಗಿರುವ ಕಾಟೇಜುಗಳ ಮೇಲೆ ಮೊದಲ ಅಂತಸ್ತು ಕೊಠಡಿಗಳನ್ನೂ, ಸಪ್ತಗಿರಿ ಸತ್ರಗಳ ಕೋಣೆಗಳನ್ನೂ ದಾನಯೋಜನೆಯಲ್ಲಿ ನಿರ್ಮಿಸುತ್ತಿದೆ ತಿರುಮಲೆಯಲ್ಲಿ ವರ್ಷಪೂರ್ತಿ ಸೇರುವ ಯಾತ್ರಿಕ ಸಂದೋಹದ ಸೇವೆಯಲ್ಲಿ ಪಾಲುಗೊಳ್ಳಲು ಭಕ್ತದಾನಿಗಳಿಗೆ ಇದೊಂದು ಸದವಕಾಶ

### 1 ಮೊದಲ ಅಂತಸ್ತು

ತಿರುಮಲೆಯ ಆಳ್ವಾರ್ ಟ್ಯಾಂಕ್, ಮಂಗಳಬಾವಿ, ಶಂಕುಮಿಟ್ಟ, ಶೇಷಾದ್ರಿನಗರ, ಅಂಜನಾದ್ರಿನಗರ, ಗರುಡಾದ್ರಿನಗರ ಕಾಟೇಜುಗಳಲ್ಲಿ -- (ಸಿ ಹಾಗೂ ಡಿ ಭಾಗಗಳು) (ನೆಲ ಅಂತಸ್ತಿನಲ್ಲಿರುವ ಎ ಹಾಗೂ ಬಿ ಬಾಗಗಳಲ್ಲಿ ಮೇಲೆ) -- ೨೦೦ ಮೊದಲ ಅಂತಸ್ತು ಕಾಟೇಜುಗಳನ್ನು ನಿರ್ಮಿಸುವ ಯೋಜನೆಯನ್ನು ಕೈಗೆತ್ತಿಕೊಳ್ಳಲಾಗಿದ್ದು ಎ ಟಿ ಸಿ., ಎಂ ಬಿ ಸಿ., ಎಸ್ ಎಂ.ಸಿ , ಎಸ್ ಎನ್.ಸಿ , ಗಳಲ್ಲಿ ನೂರು ಕಾಟೇಜುಗಳ ಮೊದಲ ಅಂತಸ್ತು ನಿರ್ಮಾಣ ಪೂರ್ತಿಯಾಗಿ, ದಾನಿಗಳಿಗೆ ನೀಡಲಾಗಿದೆ ಎ ಎನ್.ಸಿ , ಜಿ ಎನ್ ಸಿ ಗಳಲ್ಲಿನ ನೂರು ಮೊದಲ ಅಂತಸ್ತು ಕಾಟೇಜುಗಳು ನಿರ್ಮಾಣ ಪೂರ್ಣಗೊಳ್ಳುವ ಹಂತದಲ್ಲಿವೆ ಇವು ತಿರುಮಲೆಯ ಟಿ ಬಿ ಶಂಕು, ಚಕ್ರ, ನಾಮಗಳ ಬಳಿಯಿವೆ ನೆಲ ಅಂತಸ್ತಿನ ಎ ಹಾಗೂ ಬಿ ಕಾಟೇಜುಗಳು, ಮೇಲೆ ಸಿ ಹಾಗೂ ಡಿ ಕಾಟೇಜುಗಳು ಪ್ರತಿಯೊಂದೂ ಎರಡು ಕೋಣೆಗಳನ್ನು ಹೊಂದಿ (೯೭೨ ಚದರಡಿ ಹಾಗೂ ೧೦೧೨ ಚದರಡಿ) ಸ್ನಾನ ಶೌಚಗೃಹಗಳನ್ನೊಳಗೊಂಡಿರುತ್ತವೆ

ರೂ ೧.೫ ಲಕ್ಷ ರೂಗಳನ್ನು ನೀಡುವುದರಿಂದ ದಾನಿಯು ಒಂದು ಮೊದಲ ಅಂತಸ್ತಿನ ಕಾಟೇಜುಗಳನ್ನು ತಮ್ಮ (ತಮ್ಮ ಸಂಸ್ಥೆ, ಟ್ರಸ್ಟ್, ಕಂಪನಿ) ಹೆಸರಿನಲ್ಲಿ ದಾನ ಮಾಡಬಹುದು

### ರಾಮಬಗೀಚ ಅತಿಥಿ ಗೃಹಗಳು .

ಪ್ರತಿಯೊಂದು ಅಂತಸ್ತಿನಲ್ಲೂ ೫೦ ಸೂಟ್‌ಗಳಂತೆ ಮೂರು ಅಂತಸ್ತುಗಳಲ್ಲಿ ಒಟ್ಟು ೧೫೦ ಸೂಟ್‌ಗಳಿರುವ ಮೂರು ಅತಿಥಿಗೃಹಗಳನ್ನು ನಿರ್ಮಿಸಲು ಯೋಜಿಸಲಾಗಿದ್ದು ಅತಿಥಿಗೃಹ ೧ ರಲ್ಲಿ ೧೦೮ ಸೂಟ್‌ಗಳನ್ನು ನಿರ್ಮಿಸಿ ದಾನಿಗಳಿಗೆ ನೀಡಲಾಗಿದೆ ಅತಿಥಿಗೃಹ ೨ ರಲ್ಲಿ ೧೫೦ ಸೂಟ್‌ಗಳನ್ನು ನಿರ್ಮಿಸಿ ೫೮ ಸೂಟ್‌ಗಳನ್ನು ದಾನಿಗಳಿಗೆ ನೀಡಲಾಗಿದೆ ಇಲ್ಲಿನ ಮಿಕ್ಕ ೯೨ ಸೂಟ್‌ಗಳೇ ಅಲ್ಲದೆ ಅತಿಥಿಗೃಹ -- ೩ ರಲ್ಲಿನ ೧೫೦ ಸೂಟ್‌ಗಳು ನಿರ್ಮಾಣದ ಕೊನೆಯ ಹಂತದಲ್ಲಿವೆ

ಈ ಮೂರು ಅತಿಥಿಗೃಹಗಳು ದೇವಾಲಯದ ಎದುರಿಗೆ ಅರ್ಧ ಫರ್ಲಾಂಗ್ ದೂರದಲ್ಲಿ ಬೇಡಿ ಆಂಜನೇಯಸ್ವಾಮಿ ದೇವಾಲಯದ ಹಿಂಭಾಗದಲ್ಲಿ ನೂತನ ಆಸ್ಥಾನ ಮಂಟಪದ ಪಕ್ಕದಲ್ಲಿವೆ ಪ್ರತಿ ಸೂಟ್‌ನ ಪ್ಲಿಂತ್ ಏರಿಯಾ ೪೪ ೫ ಚದರಮಿಾಟರ್ ಆಗಿದ್ದು (ಸ್ನಾನ ಶೌಚಗೃಹಗಳೊಡನೆ), ಸಾಮಾನ್ಯ ಅಂಗಳವಿದೆ

ರೂ ೬೦,೦೦೦ ಮೊತ್ತದ ದಾನದಿಂದ ಒಂದು ಸೂಟ್ ಅನ್ನು ದಾನಿಗಳು ತಮ್ಮ ತಮ್ಮ ಹೆಸರಿನಲ್ಲಿ ನೀಡಬಹುದು

### ೩ ಸಪ್ತಗಿರಿ ಸತ್ರಗಳು .

ಒಂದು ಕೇಂದ್ರ ವಿಭಾಗದ ಸುತ್ತ ೯ ವಿಬಾಗಗಳಿರುವಂತಹ ಒಂದು ಮಹತ್ ಯೋಜನೆಯನ್ನು ತಿ ತಿ ದೇ ಆರಂಭಿಸಿದೆ ೧ ಹಾಗೂ ೯ ನೇ ವಿಬಾಗಗಳು ಪ್ರವೇಶ ಹಾಗೂ ಉಪಹಾರಗೃಹಗಳಿಗಾಗಿ ಕೇಂದ್ರ ವಿಭಾಗವು ಅಷ್ಟ ಮುಖಗಳ ಅಂಗಳವನ್ನು ಹೊಂದಿದ್ದು ಎಂಟು ಮುಖಗಳಲ್ಲೂ ಒಂದೊಂದು ವಿಭಾಗ ನಿರ್ಮಾಣವಾಗುವುದು ಯಾವುದೇ ವಿಭಾಗಕ್ಕೂ ೧ನೇ ವಿಭಾಗದಿಂದ ಪ್ರವೇಶ ಮಿಕ್ಕ ವಿಭಾಗಗಳು -- ೨ ರಿಂದ ೮ (ಒಟ್ಟು ೭ ವಿಬಾಗ)-- ೯೫೪ ಕೋಣೆಗಳನ್ನು ಹೊಂದಿದ್ದು ೧೧ ಕೋಣೆಗಳು ಆಡಳಿತ ನಿರ್ವಹಣೆಗಾಗಿದ್ದು ಮಿಕ್ಕ ೯೪೩ ಕೋಣೆಗಳನ್ನು ಯಾರಿಕರಿಗೆ ನೀಡಲಾಗುವುದು ಮೊದಲ ಹಂತದಲ್ಲಿ ೨ ಹಾಗೂ ೩ನೇ ವಿಬಾಗಗಳ (೧೦೮ + ೧೪೯) ೨೫೭ ಕೋಣೆಗಳ ನಿರ್ಮಾಣವನ್ನು ಕೈಗೆತ್ತಿಕೊಂಡು ಪೂರ್ಣಗೊಳಿಸುವ ಹಂತದಲ್ಲಿದೆ ಪ್ರತಿ ಕೋಣೆಯ ವಿಸ್ತೀರ್ಣ (ಸ್ನಾನ ಶೌಚಗಳೊಂದಿಗೆ) ೧೨'+೧೪' ರೂ ೪೦,೦೦೦ ಗಳ ದಾನದಿಂದ ದಾನಿಯು ತಮ್ಮ ಹೆಸರಿನಲ್ಲಿ ಕೋಣೆಯನ್ನು ನೀಡಬಹುದು ಈ ವರೆಗೆ ೮೦ ಕೋಣೆಗಳಿಗಾಗಿ ಆಂಶಿಕ ಹಾಗೂ ಪೂರ್ಣ ದಾನಗಳನ್ನು ಸ್ವೀಕರಿಸಲಾಗಿದೆ ಎರಡನೇ ವಿಬಾಗದ ಶೀಘ್ರ ಪೂರ್ಣತೆಯ ಬಳಿಕ ಅದನ್ನು ನೀಡಲಾಗುವುದು

### ೪ ಶೇಷಾದ್ರಿನಗರ ಅತಿಥಿಗೃಹ2 ·

ಎರಡಂತಸ್ತಿನ ಈ ಅತಿಥಿಗೃಹದಲ್ಲಿ ೨೭ ಸೂಟ್‌ಗಳಿದ್ದು (ಪ್ರತಿ ಅಂತಸ್ತಿಗೆ ೧೩ ಸೂಟ್‌ಗಳು) ಯಾತ್ರಿಕರಿಗೆ ಬಾಡಿಗೆಯ ಮೇಲೆ ನೀಡಲಾಗುತ್ತದೆ ಪ್ರತಿ ಸೂಟ್ ೪.೨ ಮಿಾ X ೪.೨ ಮಿಾ ಇರುತ್ತದೆ

ಇಡೀ ಅತಿಥಿಗೃಹಕ್ಕಾಗಿ ಅಥವಾ ಪ್ರತಿ ಅಂತಸ್ತಿಗಾಗಿ ದಾನಗಳಿಗೆ ಆದ್ಯತೆ ನೀಡಲಾಗುವುದು

೨೫ ಲಕ್ಷ ರೂಗಳ ದಾನದಿಂದ ವ್ಯಕ್ತಿ, ವ್ಯಕ್ತಿಗಳು ಸಂಸ್ಥೆ, ಕಂಪನಿ, ಟ್ರಸ್ಟ್ ಇಡೀ ಅತಿಥಿಗೃಹದ ದಾನಿಗಳಾಗಲು ಸಾಧ್ಯ

ದಾನಿಗಳಿಗೆ ಸೌಲಭ್ಯಗಳು --- ದಾನಿಗಳು ತಮ್ಮ ಜೀವನಾವಧಿಯಲ್ಲೂ, ಕಂಪನಿ, ಇತ್ಯಾದಿಗಳು ೧೫ ವರ್ಷಗಳೂ ವರ್ಷಕ್ಕೆ ೭೦ ದಿನ (ಒಮ್ಮೆ ೧೦ ದಿನಗಳಿಗೆ ಮಿಾರದಂತೆ) ತಮ್ಮ ದಾನದ ಕಾಟೇಜು, ಸೂಟು, ಕೋಣೆಗಳಲ್ಲಿ ನಾಮಮಾತ್ರಸೇವಾ ಶುಲ್ಕದಿಂದ ಇರಬಹುದು ದಾನಿಗಳ ಹೆಸರು ವಿಳಾಸಗಳನ್ನು ಶಿಲಾಫಲಕದಲ್ಲಿ ಕೆತ್ತಿಸಿ ದಾನದ ಕೊಠಡಿ, ಸೂಟ್‌ಗಳಲ್ಲಿ ಪ್ರದರ್ಶಿಸಲಾಗಿರುವುದು

ಮಿಕ್ಕ ವಿವರಗಳಿಗಾಗಿ ಕೂಡಲೇ ಬರೆಯಿರಿ **ಕಾರ್ಯನಿರ್ವಹಣಾಧಿಕಾರಿ,** ತಿ ತಿ ದೇ ತಿರುಪತಿ

# ಯಾಮುನಾಚಾರ್ಯರ ಸ್ತೋತ್ರ ರತ್ನ

ಡಾ|| ವಿ. ಎನ್. ಸಂಪತ್ಕುಮಾರಾಚಾರ್ಯ.

ಶ್ಲೋಕ3 ಭೂಯೋ ನಮೋ ಅಪರಿಮಿತ ಅಚ್ಯುತ ಭಕ್ತಿ
ತತ್ವಜ್ಞಾನ ಅಮೃತಾಬ್ಧಿ ಪರಿವಾಹ ಶುಭೈಃ ವಚೋಬಿಃ
ಲೋಕೇ ಅವತೀರ್ಣ ಪರಮಾರ್ಥ ಸಮಗ್ರ ಭಕ್ತಿ
ಯೋಗಾಯ ನಾದಮುನಯೇ ಯಮಿನಾಂ ವರಾಯ

ಬಾವಾರ್ಥ -- ಅಚ್ಯುತನಲ್ಲಿ ಅಪರಿಮಿತವಾದ ಪ್ರೀತಿಪೂರ್ವಕ ದ್ಯಾನ ಅಂದರೆ ಭಕ್ತಿ ಮತ್ತು ತತ್ವಜ್ಞಾನ ಎಂಬ ಅಮೃತಸಾಗರದ ಎರಡು ಕೋಡಿಗಳಿಂದ ಪರಿಶುದ್ಧವಾದ, ಯಾರವಾಕ್ಯಗಳ ಮೂಲಕ ಪರಿಪೂರ್ಣವೂ ಪರಮಪುರುಷಾರ್ಥವೂ ಆದ ಭಕ್ತಿ ಯೋಗವು ಈ ಲೋಕದಲ್ಲಿ ಅವತರಿಸಿತೋ ಅಂತಹ ಯೋಗಿಶ್ರೇಷ್ಠರಾದ ನಾದಮುನಿಗಳಿಗೆ ಪುನಃ ಪುನಃ ನಮಸ್ಕಾರ

ವಿಶೇಷಾರ್ಥ -- ಈ ಶ್ಲೋಕದಲ್ಲಿ ಯಾಮುನರು ತಮ್ಮ ಪರಮಾಚಾರ್ಯರಾದ ನಾಥಮುನಿಗಳ ಸರ್ವವಿಲಕ್ಷಣವಾದ ಆಚಾರ್ಯನ ಪ್ರತಿಬಿಂಬವಾದ ಅವರ ಹಿರಿಮೆ, ಸ್ವರೂಪಗಳನ್ನು ಅತ್ಯದ್ಭುತವಾಗಿ ಕೊಂಡಾಡುತ್ತಾರೆ ಬೂಯೋನಮಃ -- ಅಂದರೆ ಅನೇಕಾವರ್ತಿ ನಮಸ್ಕರಿಸಬೇಕೆಂದಲ್ಲ ಅವರ ನೆನಪು ಬಂದಾಗಲೆಲ್ಲ ನಮ್ರಬಾವತಲದೋರಬೇಕು ಅದು ಮಾನಸಿಕ ಅದೆಂದಿಗೂ ವಿಚ್ಛಿನ್ನವಾಗಬಾರದು ಕಾಯದಲ್ಲಿ ಅದು ದಂಡವತ್ಪ್ರಣಾಮ ಎಂದು ಹೆಸರಿಡಲಾಗಿದೆ ಒಂದು ಕೋಲು ಆಶ್ರಯವಿಲ್ಲದಿದ್ದರೆ ಕೆಳಗೆ ದೇಳುತ್ತದ ಅದಕ್ಕೆ ಸ್ವತಃ ನಿಲ್ಲುವ ಸಾಮರ್ಥ್ಯವಿಲ್ಲ ಪರಪ್ರಯತ್ನದಿಂದಲೇ ಮೇಲೆ ಏಳಬೇಕು ಅಂತೆಯೇ ದಂಡವತ್ಪ್ರಣಾಮವೆಸಗಿದ ಚೇತನನು ಗುರುವಿನ ಆಶ್ರಯವಿಲ್ಲದಿದ್ದರೆ ತಾನು ದಂಡದಂತೆ ತನ್ನಿಂದ ಏನಾದರೂ ಸೇವೆ ನಡೆಯದೇಕಾದರೆ ತನ್ನನ್ನು ಎತ್ತಿ ಸೇವೆಗೆ ಒಳಪಡಿಸಬೇಕು ಎಂಬ ಭಾವನೆಯು ನಮಃ -- ಶಬ್ದದಲ್ಲಿ ಅಡಗಿದೆ ಇದರಲ್ಲಿ ಅಹಂ -- ಮಮ ಲೇಶವೂ ಇಲ್ಲ ಅಹಂ ತೇ -- ತಾನು ಚೇತನನಾದುದರಿಂದ -- ನಿನ್ನವನು, ನಿನಗಾಗಿ ಇರುವವನು -- ಎಂದು ತಿಳಿದಿರುವವನು 'ಪಾಹಿಮಾಂ ಅಚ್ಯುತ, ಪುಂಡರೀಕಾಕ್ಷ' -- ನೀನು ನನ್ನನ್ನು ಬಿಡಲಾರೆ ನನ್ನನ್ನು ಸಲಹು ನಿನ್ನ ಕಣ್ಣುಗಳಿಗೆ ಹಿಂಸಾರೂಪ ಪದಾರ್ಥ ತೋರಿದರೆ ಆ ಪದಾರ್ಥದಲ್ಲಿರುವ ದೋಷವು ಸದ್ಯದಲ್ಲೇ ಮಾಯವಾಗುತ್ತದೆ ಮತ್ತು ಜ್ಞಾನವಿರುವುದರಿಂದ ನಾನು ಪ್ರತ್ಯೇಕಪದಾರ್ಥ ನನಗೂ ಸಾದೃಶ್ಯಭಾವನೆಯಿಂದ ನನ್ನ ಸ್ವರೂಪಕ್ಕನುಗುಣವಾದ ಜ್ಞಾನಾನಂದವು ಒದಗಿದರೆ ನಾನು ಹಾಯಾಗಿರುತ್ತೇನೆ ಈ ಫಲಪ್ರಾಪ್ತಿಗಾಗಿ ನಿನ್ನನ್ನು ಮೊರೆಯಿಡುತ್ತೇನೆ -- ಎಂಬುದು ಅಚೇತನ ಸಂಗದಿಂದ ಒದಗಿರುವ ದೌರ್ಭಾಗ್ಯ ನಾನು ಸ್ವತಃ ಜ್ಞಾನಾನಂದಮಯ ನಿನ್ನ ಸಾದೃಶ್ಯ ಪಡೆದಿರುವೆನು -- ಇದು ಲೌಕಿಕಮೊರೆ

ಮುಖ್ಯವಾಗಿ ಶಾರೀರಕ ಎಂಬ ಪದವು ವೇದಾಂತದಲ್ಲಿ ಬಳಕೆಯಲ್ಲಿದೆ ಆ ಶಾರೀರಕ ಪದಾರ್ಥವು ಪರಮಾತ್ಮನೇ ಆದುದರಿಂದ ಶಾರೀರಕ ಮೀಮಾಂಸೆಯು ಚೇತನಾ ಚೇತನ ವಸ್ತುಗಳನ್ನು ತನಗೆ ಶರೀರವಾಗಿ ಬಳಸಿಕೊಂಡಿರುವ ಏಕೈಕ ವ್ಯಕ್ತಿಯಾದ ಪರಬ್ರಹ್ಮನನ್ನೇ ಸೂಚಿಸುತ್ತದೆ ಆದುದರಿಂದ, ಮದುರಕವಿಯಾಳ್ವಾರರೂ, ಯಾಮುನಾಚಾರ್ಯರೂನುಡಿದಿರುವ ರೀತಿಯಲ್ಲಿ ಜೀವನಿಗೂ ಪರಮಾತ್ಮನಿಗೂ ಇರುವ ಶಾಶ್ವತವಾದ ಶರೀರಾತ್ಮ ಸಂಬಂದವು ವ್ಯಕ್ತವಾಗಿದೆ ಈ ಭಕ್ತಿಯನ್ನು ಈಶ್ವರ ಶರೀರನಾದ, ಜ್ಞಾನದ್ರವ್ಯವಾದ ಚೇತನನಿಗೆ ಈಶ್ವರನೇ ಒದಗಿಸುತ್ತಾನೆ ಅದು ಪರಭಕ್ತಿ, ಪರಜ್ಞಾನ ಮತ್ತು ಪರಮಭಕ್ತಿ ಎಂದು ಮೂರು ಹಂತಗಳಾಗಿ ಕಾಣಿಸಿಕೊಳ್ಳುತ್ತದೆ ಪರಭಕ್ತಿಎಂದರ ತಿಳುವಳಿಕೆಗಾಗಿ ಹಂಬಲ, ಪರಜ್ಞಾನವೆಂದರೆ ತಿಳುವಳಿಕೆಯು ಯಾವಾಗಲೂ ಇರಬೇಕು ಎಂಬುದು, ಪರಮಬಕ್ತಿ ಎಂದರೆ ಏನು ಪ್ರಯತ್ನಮಾಡಿದರೂ ಅಗಲಿಕೆಯು ತ್ಯಾಜ್ಯ ಈ ಮೂರನೆಯ ಭಕ್ತಿ ನಮ್ಮಾಳ್ವಾರರ ಪ್ರಬಂದಕ್ಕೆ ಹಿರಿಮೆ ಸಲ್ಲುತ್ತದ ಇದು ಪರಮಾತ್ಮನ ಕೃಪಯಿಂದ ಲಭ್ಯವಾದ ಬಾಗ್ಯ ಕವಚ ಲೌಕಿಕದಲ್ಲಿ ಕಂಡಿರುವಂತೆ ಚೇತನನ ಪ್ರಯತ್ನದಿಂದ ಸಂಪಾದಿಸಿದ ವೈಲಕ್ಷಣ್ಯ ಜ್ಞಾನಕ್ಕೆ ಸನ್ಮಾನವಲ್ಲ ಅನುಗ್ರಹವಿದ್ದರ ಚೇತನ ಅಗಲಿದರ ಅಚೇತನಕ್ಕಿಂತ ಅಪಾಯಕರ ಇದೇ ಆಸುರ ಬಾವ ಎಂದೆನಿಸಿಕೊಳ್ಳುತ್ತದ ಸಮಾಜದ ಏಳಿಗೆಗೆ ಸೇವೆ ಸಲ್ಲಿಸುವ ಬದಲಾಗಿ ಅವರ ವಿನಾಶಕ್ಕೆ ಬದ್ಧಕಂಕಣನಾಗಿ ಬರುವ ಚೇತನ ಹಿರಣ್ಯ, ರಾವಣ, ಶಿಶುಪಾಲ, ಕಂಸ ಇತ್ಯಾದಿ ಪುರುಷರು, ಮಂಥರ, ತಾಟಕಿ, ಶೂರ್ಪನಖಿ, ಕಾಕಾಸುರ ಮುಂತಾದ ಸ್ತ್ರೀ ಮತು ಪ್ರಾಣಿಗಳು ಇದಕ್ಕ ಉದಾಹರಣ

ಪರಮ ಪದದ ಅನುಬವಪ್ರಾಪ್ತಿಯಿಂದ ಸಂಸಾರ ಲೋಕದಲ್ಲಿ ತಿಳಿಗೇಡಿಗಳಿಗೂ ಉಪಯೋಗವಾಗಲಿ ಎಂಬ ಸಾಮಾಜಿಕ ನ್ಯೆರ್ಮಲ್ಯ ದೋಗಗಳಿಗೆ ಬದ್ಧಕಂಕಣರಾಗಿ, ಭೂಲೋಕದಲ್ಲಿ ಕಾಣಿಸಿಕೊಂಡಿರುವವರು ಪರಾಂಕುಶ, ಮದುರಕವಿ, ನಾದಮುನಿ ಎಂಬ ಈ ಮಹನೀಯರು ಆದ್ದರಿಂದ ವ್ಯಕ್ತಾಂತರವನ್ನು ಲಕ್ಷಿಸದ ಉದ್ದಿಷ್ಟವ್ಯಕ್ತಿಯ



ಅನುಷ್ಠಾನವನ್ನು ಕೈಬಿಡದಿದ್ದರ ಪ್ರಾಪ್ತವಾಗುವ ಬೋಗ ಸಾಮರಸೋ ಗಾನ -- ಅಸಂಗಬೀತಿ, ಸಂಗಕಾಮು ಈ ಬಾವನ ಲೌಕಿಕವರ್ಗ ವಲ್ಲಿ ಮೂಡಿವರೆ ಲೋಕವೂ ವ್ಯದಿಕವಾಗುವುವರಲ್ಲಿ ಸಂದೇಹವಿಲ್ಲ ಎಂಬುದಾಗಿ ವಿಷ್ಣುಚಿತ್ತರು, ಗೋದಾದೇವಿ, ಭಕ್ತಾಂಘ್ರಿರೇಣು, ಪರಾಂ ಕುಶರು, ಮದುರಕವಿ ಮತ್ತು ಈ ಪ್ರಕರಣದಲ್ಲಿ ಶ್ರೀರಾಮಾನುಜರ ಪರಮಗುರುಗಳಾದ ಯಾಮುನರು ಆಗಿರುತ್ತಾರೆ ತತ್ಕಾರಣ ಆಚಾ ರ್ಯರ ಮುಖ್ಯೋಪದೇಶ -- ಪ್ರಣವವನ್ನರಿತು, ಪರಾಂಕುಶ ಪ್ರಬಂ ದದಲ್ಲಿ ಸಂತತವಾಗಿ ಏಕಾಗ್ರನಿಷ್ಠೆಯನ್ನು ಉಳಿಸಿಕೊಳ್ಳುವುದು, ಅದ ರಲ್ಲೂ ವ್ಯಯಕ್ತಿಕವಾಗಿ ಸಮಾಜದಲ್ಲಿ ಬೆರೆತು, ಕಲತು ಸಾರ್ವತ್ರಿಕ ಬೋಗ ಅನುಬವಿಸುವುದು, ಅಲೌಕಿಕ ಶಾಸ್ತ್ರಸಂಗ್ರಹ ಈ ಭಾವನೆ ಸಮಾಜದಲ್ಲಿ ತೋರಿದರ ಲೌಕಿಕ ಪುರುಷಾರ್ದಗಳಿಗೆ ಗಮನಕೊಡು ವುದರ ಬದಲು ಚೇತನೋಜ್ಜೀವನಕ್ಕೆ ಆಸ್ಪದವಾಗಿ, ಸರ್ವತ್ರ ಸಮೃದ್ಧಿ ಅನಿವಾರ್ಯವಾಗುತ್ತದೆ ವೈದಿಕರು ಲೌಕಿಕರ ಏಳಿಗಗೆ ಶ್ರಮವಹಿಸ ಬೇಕು ಅವರ ವಶಕ್ಕೆ ಗುರಿಯಾಗಬಾರದು ಇದಕ್ಕ ಈಶ್ವರನಕೃಪೆಯೇ ಕಾರಣ ಆದ್ದರಿಂದ ಅಹಂ ಮಮ ಬಾವತೊಲಗಿ ಈಶ್ವರಶರೀರದೆಂಬ ಭಾವನೆ ಸಹಜವಾಗಿ ಮೂಡಿದರೆ ಪ್ರತ್ಯಕ್ಷಂ ಪರಮಂಪದಂ ಪರಮಾ ತ್ಮನು ಆದಿಗುರು ಅವನನ್ನು ಅವಲಂಬಿಸಿ ಲೋಕಕ್ಕೇ ತತ್ವದೀಪವನ್ನು ಒದಗಿಸುವ ಸೇವಾಪರರೇ ಪರಮಾತ್ಮನ ಶರೀರವಾಗಿ ಪ್ರದಮಾಚಾ ರ್ಯನಾದ ಅವನನ್ನು ಉದ್ಧಾರಕ್ರಮದಲ್ಲಿ ಒಂದೇ ಜೀವಿತದಲ್ಲಿ ಕಾಣ ಸುತ್ತಾನೆ

ಶ್ಲೋಕ4 ತತ್ವೇನ ಯಃ ಚಿದ್ ಅಚಿದ್ ಈಶ್ವರ ತತ್ ಸ್ವಭಾವ
ಭೋಗ ಅಪವರ್ಗ ತದುಪಾಯ ಗತೀಃಉದಾರಃ
ಸಂದರ್ಶಯನ್ ನಿರಮಮಿತ ಪುರಾಣರತ್ನಂ
ತಸ್ಮೈ ನಮೋ ಮುನಿವರಾಯ ಪರಾಶರಾಯ

ಭಾವಾರ್ಥ ಚಿತ್ತು, ಅಚಿತ್ತು, ಈಶ್ವರ ಎಂಬ ಮೂರು ತತ್ವಗಳನ್ನೂ ಅವುಗಳ ಸ್ವಭಾವವನ್ನೂ, ಸ್ವಾತ್ಮಾನುಭವರೂಪವಾದ ಕೈವಲ್ಯವನ್ನೂ, ಮೋಕ್ಷವನ್ನೂ, ಅವುಗಳ ಸಾದನಗಳಾದ ಪ್ರವೃತ್ತಿ, ನಿವೃತ್ತಿ ದರ್ಮಗ ಳನ್ನೂ ಮತ್ತು ಅರ್ಚಿರಾದಿ ದೂಮಾದಿ ಮಾರ್ಗಗಳನ್ನೂ ಎಲ್ಲರಿಗೂ ಸ್ಪಷ್ಟವಾಗಿ ತೋರಿಸಲು ಪುರಾಣರತ್ನವಾದ ವಿಷ್ಣುಪುರಾಣವನ್ನು ರಚಿ ಸಿದ ಉದಾರಸ್ವಭಾವದ ಪರಾಶರ ಮುನಿಶ್ರೇಷ್ಠರಿಗೆ ನಮಸ್ಕಾರ

ವಿಶೇಷಾರ್ಥ ನಿಜವಾದ ಮೋಕ್ಷವೆಂದರೆ ಅನಪೇಕ್ಷಿತ ವೈರಾಗ್ಯ ಅಪೇಕ್ಷಿತ ಸಾಮ್ರಾಜ್ಯ ಅಂದರೆ ಚಿರಸ್ಥಾಯಿಯಾದ ಭಗವತ್ ಸಂಬಂದ ಜ್ಞಾನವು ಏರ್ಪಡುತ್ತದ ಎಂಬ ಲೌಕಿಕ ವೈದಿಕ ಬೇದಗ ಳನ್ನು ವೇದದಿಂದ ವಿಮರ್ಶೆಪೂರ್ವಕವಾಗಿ ಸಂಗ್ರಹಿಸಿ ಉಪಕಾರಮಾ ಡಿರುವ ಒಬ್ಬ ಪರಮಾಚಾರ್ಯರು ಪುರಾಣ ರತ್ನವನ್ನು ರಚಿಸಿದ ಶ್ರೀ ಪರಾಶರ ಮಹರ್ಷಿ

ಈ ಮಹರ್ಷಿಯು ರಘುವಂಶಕುಲ ಗುರುವಾದ ವಶಿಷ್ಠ ಮಹ ರ್ಷಿಯ ವಂಶಸ್ಥ ೮ ಮಹರ್ಷಿಯು ಶ್ರೀರಾಮನ ಗುರುವಿಶ್ವಾಮಿತ್ರ ರಿಗೆ ಬ್ರಹ್ಮತೇಜಸ್ಸಿನ ವೈಭವವನ್ನು ಪ್ರಕಟಪಡಿಸಿದವರು ಆತನ ಪುತ್ರ ಶಕ್ತಿ ಮಹರ್ಷಿ, ಆತನ ಪುತ್ರ ಪರಾಶರ, ಆತನ ಮಗ ವ್ಯಾಸಮಹರ್ಷಿ ಕೊನೆಯ ಸಂತತಿ ಶುಕ ಎಂಬುದಾಗಿ ಪಂಚವ್ಯಕ್ತಿಗಳನ್ನು ಒಳಗೊಂಡ ವೇದಾಂತವೇತ್ತರಾದ ಶಿಷ್ಯರ ಒಂದು ಭಾಗ ಅವರನ್ನು ಈ ಕಾರಣ ದಿಂದ ಸ್ಮರಿಸಲಾಗಿದ

ಸುಪ್ರಸಿದ್ಧರಾದ ಮುನಿಗಳಲ್ಲಿ ಮನ್ನಣೆಯನ್ನು ಪಡೆದು ರಾರಾ ಜಿಸುವ, ಅಜ್ಞಾನಿಗಳನ್ನು ಅಂದರೆ ಜ್ಞಾನಿಗಳೆಂದು ಬ್ರಾಂತರಾದವ ರನ್ನು ನಿಗ್ರಹಿಸುವವರು --ಎಂಬ ಅರ್ದಕೊಡಬಲ್ಲ ನಾಮದೇಯ ದಿಂದ ಬೆಳಗುತ್ತಿರುವವರು ಮುನಿಶ್ರೇಷ್ಠರಾದ ಪರಾಶರರು, ಸ್ವಾರ್ದ ತೆಯ ನಿರ್ಮೂಲದ ಮೂಲಕ ಸಮಾಜವನ್ನು ಕ್ಲೇಶಕ್ಕೆ ಗುರಿಪಡಿಸದೆ ತಿಳುವಳಿಕೆ ನೀಡಿದ ಮಹಾನುಭಾವರು ಪರಾಶರರು, ಜ್ಞಾನಮಾರ್ಗ ದಲ್ಲಿ ಗುರೂತ್ತಮನಾದ ವಶಿಷ್ಠನ ವಂಶದಲ್ಲಿ ಜನಿಸಿದ, ಪುರಾಣರೂ ಪದ ದೀವಿಗೆಯನ್ನು ನೀಡಿದ ಮಹಾ ಪುಣ್ಯಶಾಲಿಯಾದ ಪರಾಶರರು, ಅವರು ವೈದಿಕ ಸಂಸ್ಕೃತಿಯ ದಿವ್ಯ ದೀವಿಗಯನ್ನು ಲೋಕೋದ್ಧಾರ ಕ್ಕಾಗಿ ಹಿಡಿದ ಮುನಿವರರು

ಗುರುವನ್ನು ಮರೆತರೆ, ಗುರುನುಡಿಯನ್ನು ಅಲ್ಲಗಳೆದರೆ ಈ ಪ್ರಪಂ ಚದಲ್ಲೇ ರೌರವನರಕದಲ್ಲಿ ತೋರುವ ದುಃಖಾನುಭವಕ್ಕೆ ತುತ್ತಾಗದೇ ಕಾಗುತ್ತದೆ ಆದ್ದರಿಂದ, ಯದಾದ್ಯವೇ ತದಾಗುರೌ -- ಎಂಬಂತ ಸ್ವಾರ್ದತ ಎಂಬುದಕ್ಕೆ ಮೂಲಕಾರಣವಾದ ಅಹಂಬಾವ ತೊರೆದು ದೇವರಲ್ಲಿ ನಮ್ರನಾಗಿರುವಂತ, ಗುರುದಿನಲ್ಲಿ ನಡೆದುಕೊಂಡರೆ -- ಪಕ್ಷಪಾತವಿಲ್ಲದಿದ್ದರೆ ಅವನಿಗೆ ಸಕಲವೂ ಸದಾಗೋಚರವಾಗುತ್ತದೆ ಇದು ಪುಣ್ಯ ತತ್ವದ ಪ್ರಭಾವ ಅಹಂಕಾರ ಮಮಕಾರಗಳ ನಿರ್ಮೂಲ ನಕ್ಕೆ ಪ್ರಾದಮಿಕವಾದ ಪ್ರಯತ್ನ

ಈ ಪರಾಶರರು ನಮಗೆ ನೀಡಿದ ಬೆಳಕು ವೇದದಲ್ಲಿ ತೋರಿಬ ರುವುದು ವೇದದಲ್ಲಿ ಉಪದೇಶದ ಫಲವಾಗಿ ಏರ್ಪಟ್ಟುದು ಚೇತ ನಾಚೇತನವಿವೇಕ ಚೇತನನಾದವರೂ ಈಶ್ವರ ಸಹಾಯದ ಅವಶ್ಯಕತೆ ಎಂಬ ತತ್ವ ಪ್ರಕಾಶವಾಗಿದೆ ಇಷ್ಟರಲ್ಲೇ ತೃಪ್ತಿಯಾದರೆ ಈಶ್ವರಾನು ಗ್ರಹದಿಂದ ಜ್ಞಾನವೈರಾಗ್ಯ ಬೂಷಣರಾಗುತ್ತಾನ ಅಂದರೆ ಚೇತನಗ ತವಾದ ಅಚೇತನ ಸಂಪರ್ಕಜನಿತವಾದ ದೋಷ ನಿರ್ಮೂಲವಾಗು ತ್ತದೆ ಶಾರೀರಕ ಉಳಿದರ ಜ್ಞಾನಕ್ಕ ವೈರಾಗ್ಯ ಒದಗಿಸುತ್ತದ

ಆರೋಪಣ ಮಾಡದ ಶುದ್ಧವಾದ ತಿಳುವಳಿಕ ಉಳಿಸಿಕೊಳ್ಳು ವುದು ತತ್ವ, ಅದರ ಪಲಸ್ವೀಕಾರ ತ್ಯಾಗರೂಪವಾಗಿದೆ ಅಂದರೆ ಸ್ವರೂಪವನ್ನು ಉಳಿಸಿಕೊಂಡು ಬರದೇಕೇ ವಿನಾ ಫಲಕ್ಕಾಗಿ ಸ್ವರೂಪ ಕಳೆದುಕೊಳ್ಳಕೂಡದು ಎಂಬುದು ಇದರ ಭಾವ

ಪರಾಶರರ ಕೊಡುಗ ಚಿತ್, ಅಚಿತ್, ಈಶ್ವರ ಎಂಬ ಮೂರು ತತ್ವ ಗಳ ನಿರ್ದೇಶ, ಅವರ ಸ್ವಭಾವ, ಅವರ ಸಂಪರ್ಕದಿಂದ ಭೋಗ, ತತ್ವ ತ್ರಯದ ಪ್ರಾದಾನ್ಯಾನುಗುಣವಾಗಿ ಏರ್ಪಟ್ಟ ಸಂಬಂದಜನಿತ ಬೋಗ, ಆಸೆಯನ್ನು ಈಡೇರಿಸಿಕೊಳ್ಳುವಬಗ, ಚೇತನನು ತನ್ನ ತನವನ್ನು ಉಳಿ ಸಿಕೊಳ್ಳಲು ಅಚೇತನ ತತ್ವ ಬಳಸುತ್ತಾನೆ ಈ ಸಂಪರ್ಕಕ್ಕೆ ಬಿಟ್ಟರೆ ಜ್ಞಾನಾನಂದಮಯವಾದ ಸ್ವಬೋಗ ಅಂದರೆ ಕೈವಲ್ಯ ಅದವಾ ಅಸಂ ಗಭೋಗ ಅಂತಯೇ ಅಪವರ್ಗ ಅಂದರೆ ಈಶ್ವರನೊಡನೆಕಲೆತು ಅನುಭವಿಸಬಹುದಾದ ಆನಂದ ಈ ಮೂರು ಪಲ , ಬೋಗ, ಅಪವರ್ಗ -- ಇವುಗಳಲ್ಲಿ ಭೋಗಕ್ಷಣಿಕ, ಅಪವರ್ಗಸ್ಥಿರ, ಇದಕ್ಕಿಂತ

ಮೇಲಿಲ್ಲ ದೋಗಕ್ಕಿಂತ ಕೀಳಿಲ್ಲ ಈ ಮೂರು ಪುರುಷಾರ್ದಗಳನ್ನು ಒವಗಿಸಿಕೊಡಬಲ್ಲ ಸಾದನ, ಕೈಕೊಳ್ಳದೇಕಾದ ಕ್ರಮ ಮತ್ತು ಅವಲಂಬನ ಮಾರ್ಗ -- ಉವಾಯ -- ಕರ್ಮಾಚರಣ, ಕೇವಲ ಜ್ಞಾನ ಮತ್ತು ಭಕ್ತಿ -- ಇವುಗಳನ್ನು ಕೂಲಂಕಷವಾಗಿ ವಿವರಿಸುತ್ತಾರೆ ಸಮಾಜಕ್ಷೇಮಕ್ಕಾಗಿ ಸ್ವಾರ್ದವಲ್ಲ, ಅಜ್ಞಾತವೂ ಅಲ್ಲ ಅನುಬವಪೂರ್ವಕವಾಗಿ ತಮ್ಮ ಬಾಗ್ಯವನ್ನು ಲೋಕಕ್ಕೆ ನೀಡಿರುವ ಪರಸಮೃದ್ಧಿ ಎಂಬ ಏಕೈಕ ದೋರಣೆಯನ್ನು ಕರಣತ್ರಯ ಪೂರ್ವಕವಾಗಿ ಬಗೆಯುತ್ತಾರೆ ಸ್ವಾರ್ದರಹಿತ ಪರಹಿತ ಚಿಂತನ, ತದರ್ದವಾಗಿ ಮುಡಿಪಾಗಿಟ್ಟಿರುವ ತಮ್ಮ ಜೀವಿತ -- ಇದು ಸಾಮಜನ ಲಕ್ಷಣ ಇಂದಕೊಡುಗೆಯನ್ನು ವೇದಗಳಿಂದ ಸಂಗ್ರಹಿಸಿ ವಂಶಪಾರಂಪರ್ಯವಾಗಿ ಅದನ್ನು ಉಜ್ವಲಗೊಳಿಸುತ್ತ ಮಿರಿದ ಉಪಕಾರಿ ವ್ಯಾಸರ ತಂದ ಮಹರ್ಷಿ ಪರಾಶರರು ಅವರ ಗ್ರಂದಕ್ಕ ವಿಷ್ಣು ಪುರಾಣ ಎಂಬ ಹಸರಿಟ್ಟಿರುವುದರಿಂದ ಈಶ್ವರನು ಪರಬ್ರಹ್ಮ ಶಾರೀರಕ, ನಾರಾಯಣ, ವಿಷ್ಣು, ಎಂದು ಹೇಳಿ ತತ್ತ್ವ, ಅವರ ದೇಹ, ಕೃಗೂಳ್ಳದೇಕಾದಕೃತ್ಯ, ಕೈಗೊಳ್ಳಬಾರದ ಅಕೃತ್ಯಗಳು -- ಇವುಗಳನ್ನೆಲ್ಲಾ ಮೈತ್ರೇಯನಿಗ ತಿಳುವಳಿಕ ನೀಡುವ ಮೂಲಕ ವಿಶ್ವಕ್ಕೆ ಹಂಚಿ ಉಪಕಾರ ಮಾಡಿದವರು ಅಂದ ಗುರುವನ್ನು ಎಂದೆಂದಿಗೂ ಮರೆಯಬಾರದು, ಕಡೆಗಣಿಸಬಾರದು ಎಂಬುದಾಗಿ ಸ್ವನಿಷ್ಠೆಯ ಮೂಲಕ ಲೋಕಕ್ಕೆ ಯಾಮುನಾಚಾರ್ಯರು ಈ ಶ್ಲೋಕದಲ್ಲಿ ತಿಳುವಳಿಕೆ ನೀಡಿದ್ದಾರೆ

ಶ್ಲೋಕ5 ಮಾತಾ ಪಿತಾ ಯುವತಯಃ ತನಯಾಃ ವಿಬೂತಿಃ
ಸರ್ವಂ ಯದೇವ ನಿಯಮೇನ ಮದನ್ವಯಾನಾಂ
ಆದ್ಯಸ್ಯಃ ನಃ ಕುಲಪತೇಃ ವಕುಳಾಬಿರಾಮಂ
ಶ್ರೀಮತ್ ತದಂಘ್ರಿಯುಗಳಂ ಪ್ರಣಮಾಮಿ ಮೂರ್ದ್ನಾ

ಭಾವಾರ್ದ -- ನಮ್ಮಮೊಟ್ಟಮೊದಲನೆಯ ಕೂಟಸ್ಥರಾದ ಶ್ರೀಪರಾಂಕುಶಮುನಿಗಳ ಸಂಪದ್ಯುಕ್ತವೂ ಪಗಡೆಹೂಗಳಿಂದ ಅಲಂಕೃತವೂ ಆದ ಯಾವ ಅಡಿದಾವರೆಗಳು ನಮ್ಮ ವಂಶದವರಿಗೆಲ್ಲಾ ಸರ್ವದಾ ತಾಯಿ, ತಂದೆ, ಹೆಂಡಿರು, ಮಕ್ಕಳು, ಐಶ್ವರ್ಯ ಎಲ್ಲವೂ ಆಗಿವೆಯೋ, ಅಂತಹ ಆಶ್ರಿತರಿಗೆ ಮೋಕ್ಷಾದಿ ಸಂಪತ್ತುಗಳನ್ನು ಕೊಡುವುದರಲ್ಲಿ ಪ್ರಸಿದ್ಧವಾದ ಪಾದಗಳಿಗೆ ಶಿರಸಾ ನಮಸ್ಕರಿಸುತ್ತೇನೆ

ವಿಶೇಷಾರ್ದ -- ಯಾಮುನಾಚಾರ್ಯರು ಈ ಶ್ಲೋಕದಲ್ಲಿ ಕುಲಪತಿಯಾದ ನಮ್ಮಾಳ್ವಾರರನ್ನು ವಂದಿಸಿದ್ದಾರೆ ನಮ್ಮಾಳ್ವಾರರು ಎಂದಹವರು? ವೇದಾಂತರಹಸ್ಯವಾದ ಬದರೀನಾದನ ಉಪದೇಶಫಲವಾದ ಶ್ರೀಮದಷ್ಟಾಕ್ಷರೀ ಬೋಧೆಯನ್ನು ಪರಿಪೂರ್ಣವಾಗಿ, ಅನುಬವಪೂರ್ವಕವಾಗಿ ಪಡೆದು ಈ ಜಗತ್ತಿನಲ್ಲಿ, ಜಗತ್ಪ್ರಭಾವಕ್ಕೆ ಒಳಗಾಗದೆ, ಕೇವಲ ಪ್ರಣವರಹಸ್ಯಾರ್ಥ ವಿವರಣೆಯಾದ, ಚರಮೋಪದೇಶವಾದ ಅಷ್ಟಾಕ್ಷರಿಯನ್ನು ಅಂದರೆ ಪ್ರಣವ ಸಹಿತವಾಗಿ, ಅದರ ವಿವರಣೆಯಾಗಿ ತತ್ತ್ವತ್ರಯ ಮತ್ತು ಅವುಗಳ ಹೊಂದಾಣಿಕೆ ಅಂದರೆ ಅರ್ದಪಂಚಕ ಸ್ವರೂಪ, ವೃತ್ತಿ, ಫಲ, ಸಾದನ ಮತ್ತು ತ್ಯಾಜ್ಯ -- ಇವುಗಳನ್ನೊಳಗೊಂಡ ವೇದಾರ್ದವನ್ನು ಆದಿನಾದನ ಸಮ್ಮುಖದಲ್ಲಿ ಜನ್ಮಪ್ರಭೃತಿ ಸಾಂಸಾರಿಕ ಪ್ರಸಕ್ತಿಯಿಲ್ಲದೆ, 32 ಸಂವತ್ಸರಗಳು ಹುಣಸೆ ಮರದ ಮೂಲ ಬಾಗದಲ್ಲಿ ಕುಳಿತು, ಪರಮಾತ್ಮನಿಗೆ ಒಡಲು ಹಾಗೂ ಸಾದನೆಯೂ ಆಗಿ, ಆ ಮೂಲಕ ಜ್ಞಾನಸ್ವರೂಪವನ್ನು ತಳೆದು ಚೇತನಮಯವಾಗಿ, ಬಗವಂತನ ಉಪದೇಶಾದಿಗಳಿಗೆ ಉಪಕರಣವಾಗಿ ಉಳಿದುಕೊಂಡ, ಬಗವಂತನ ಅಗಲಿಕಯನ್ನು ಕ್ಷಣ ಮಾತ್ರವೂ ಸಹಿಸಲಾರದ, ಶಾರೀರಕನಾದ ಬಗವಂತನಿಗ ಅದು ಮಿಾಸಲಾದುದು ಎದು ಮನಗಂಡು, ತತ್ಕಾರಣದಿಂದ ಬಗವಂತನ ವೈಬವ ಅಂದರ ಬಗವಂತನನ್ನೇ ಸ್ಮರಣೆಗೆ ತರಬಲ್ಲ ಸಂಕಲ್ಪವೃಕ್ಷ ಅತ್ಯಗತ್ಯವಾದ ಜ್ಞಾನಮುಟ್ಟವಲ್ಲಿ ಬ್ರಹ್ಮನಿಗಿಂತಲೂ ಅಗ್ರಜನಾಗಿ, ಈಶ್ವರ ಸಂಬಂದದಿಂದ ಚೇತನಾಚೇತನ ವಸ್ತುಗಳನ್ನು ಗ್ರಹಿಸುವರೀತಿ, ನಡವಳಿಕ ಮತ್ತು ಶಾಂತಿ ಸಮಾದಾನಗಳನ್ನು ಎತ್ತಿ ಹಿಡಿಯಲು, ಇವೆಲ್ಲಕ್ಕು ಬಗವಂತನೇ ಕಾರಣ, ಸಾಕ್ಷಾತ್ ನಿರ್ವಾಹಕ, ಚೇತನನು ಉಪನಿರ್ವಾಹಕನಲ್ಲ ಎಂಬ ತತ್ತ್ವ ರಹಸ್ಯವನ್ನು ಅನುಬವ ಪೂರ್ವಕವಾಗಿ, ಗಾನಮಯವಾದ ಅವಸ್ಥಾಬೋದಕ ಆನಂದನೆಲೆಯನ್ನು, ಅವರ ವಿರಹದಲ್ಲಿ ಸಂಬವಿಸುವ ತಡಯಲಾರದ ಕ್ಲೇಶವನ್ನು ಅನುಬವಿಸಿ, ಬಗವಂತನ ಗುಣಚೇಷ್ಟಿತಗಳಿಂದ ಜನಸ್ತೋಮದಲ್ಲಿ ವಿರೋದಿ ನಿರಸನ ಕ್ರಮ ಮತ್ತು ಪರಿಪಾಲನ ರೀತಿ ನೀತಿಯನ್ನು ಪ್ರಕಟ ಪಡಿಸುವ ರಕ್ಷಕತ್ವವಾಚಕವಾದ ಅಕಾರವಲಿ ಬಗವದ್ವ್ಯಾಪಾರವನ್ನು ಅನುಬವಿಸಿ, ತನ್ನನ್ನು ಕೈಬಿಡದ ರಕ್ಷಣಗ ಒಳಪಡಿಸಿಕೊಳ್ಳಬೇಕು, ವಸ್ತುತಃ ಇತರರಲ್ಲಿ ಕಾಣಬರುವ ಸ್ವರಕ್ಷಣ ಸಾಮರ್ದ್ಯವು ತನ್ನಲ್ಲಿಲ್ಲದಿರುವುದರಿಂದ ಭಗವಂತನ್ನು ರಕ್ಷಣೆಗೆ ಇವರನ್ನು ಸೇರಿಸಿಕೊಳ್ಳಬೇಕು ಅನ್ಯದಾಶರಣಂನಾಸ್ತಿ, ತ್ವಮೇವ ಶರಣಂ ಮಮ --ಎಂಬಂತೆ ಮಾರ್ಗಾಂತರವಿಲ್ಲ, ನೀನೇ ನನಗೆಗತಿ, ಮತ್ತೊಂದಿಲ್ಲ ಎಂಬ ಈ ಇಬ್ಬಗೆಯ ಬಾವನಯನ್ನು ತಳೆದು ವಿಳಂಬವನ್ನು ಸಹಿಸಲಾರದೆ, ಸಂಶ್ಲೇಷ ಸುಖವನ್ನು ಅನುಬವಿಸಲು ಅವನ ಬಳಿಕೆಗ ಉಳಿಸಿಕೊಳ್ಳಬೇಕೆಂಬ ಹಂಬಲಿಕ -- ಇವರ ವದನಾರವಿಂದದ ಮೂಲಕ ಹೊರಹೊಮ್ಮಿತ್ತು ಆದ್ದರಿಂದ ಪರಾಂಕುಶರು ಬಗವದ್ವೈಬವ ಅವತಾರ ಅಂದರ ಭಗವಂತನ ಅವತಾರಗಳಲ್ಲಿಶರೀರಗಳು ಮಾತ್ರ ಬೇರೆ ಬೇರೆ ಆದರೂ ಇದರಲ್ಲಿ ಶ್ರೀ ಪರಾಂಕುಶರ ಆತ್ಮವೆಂಬ ಶರೀರವನ್ನು ಪ್ರವೇಶಿಸಿ ಬಗವಂತನು ದರ್ಮಗ್ಲಾನಿಯಲ್ಲಿ ತಲೆದೋರಿದ ಅದರ್ಮವನ್ನು ಸದೆಬಡಿದು, ದರ್ಮ ಸಂರಕ್ಷಣೆಯನ್ನು ಸ್ವತಃ ಕೈಗೊಳ್ಳುವ ವಿದಾನ ಮತ್ತು ಆ ಸಂದರ್ಬದಲ್ಲಿ ಚೇತನನಾದ ಪರಾಂಕುಶರು ಇಂದ ಬಳಿಕೆ ಕ್ಷಣಕಾಲವೂ ತಪ್ಪಬಾರದು ಎಂಬ ಪ್ರಾರ್ದನ --ಅಂದರ ಬಗವದುಪಯೋಗಕ್ಕಾಗಿ ನಿತ್ಯ ಕಿಂಕರನಾಗಿರುವ ಅವಸ್ಥೆಯನ್ನು ಸದಾಪಡದು, ಅಚೇತನ ವೈಲಕ್ಷಣವನ್ನು ಬಗವಂತನ ಜಗದ್ವ್ಯಾಪಾರದಲ್ಲಿ ಪ್ರಕಾಶಪಡಿಸಲು, ನಾರಾಯಣ ಶಬ್ದದ ಪ್ರಣವದ ವಿವರಣೆಯಾದ ಉತ್ತುಂಗ ಬಾವನೆಯನ್ನು ಪ್ರಕಾಶಪಡಿಸಲು ಪ್ರದಮ ಸಾದನವಾದ ನಮ್ಮಾಳ್ವಾರ್ ಇವರು ಜನಸ್ತೋಮಕ್ಕೆ ಗಾಡತಮವಾದ ಅಮೃತವನ್ನು ಒವಗಿಸಿ ರಕ್ಷೆಯನ್ನು ಒದಗಿಸುವ ಮಹಾ ವ್ಯಕ್ತಿ

ಆದ್ದರಿಂದ ನಾರಾಯಣಮಂತ್ರವನ್ನು ಜನಗಳಿಗ ಅನುಬವ ಪೂರ್ವಕವಾಗಿ ಉಪದೇಶಮಾಡಿದ ಆದಿವ್ಯಕ್ತಿ, ಗುರೂತ್ತಮ, ಮಹಾವ್ಯಕ್ತಿ ಶಠಕೋಪರು

ಒಟ್ಟಿನಲ್ಲಿ ಹೇಳುವುದಾದರ ಈ ಮಹಿಮೆಯನ್ನು ತಮ್ಮ ತಾತಂದಿರ ಮೂಲಕ ಅರಿತ ಯಾಮುನಾಚಾರ್ಯರು ನಾರಾಯಣ ಶಬ್ದಕ್ಕೆ ಅನುಭವಪೂರ್ವಕವಾಗಿ ತಾತ್ಪರ್ಯ ನೀಡಿದ ಶಠಕೋಪರನ್ನು ಸರ್ವವಿದ

ದಲ್ಲೂ ತಮಗೆ ಬಂಧುವಾಗಿ ಭಾವಿಸುವುದಲ್ಲದೆ ತಮ್ಮ ಸಂಬಂಧವನ್ನು ಪಡೆಯುವ ಭವಿಷ್ಯತ್ಕಾಲದ ಸರ್ವರಿಗೂ ಈ ಭಾಗ್ಯ ಏರ್ಪಡಬೇಕು ಇದಕ್ಕೆ ಕಾರಣರಾದ ಆ ಮಹಾನುಭಾವರು ಅತಿ ಮಿಗಿಲಾದ ರತ್ನವೆಂದು ಭಾವಿಸಿ ಅವರಡಿಗಳಿಗೆ ನಮಸ್ಕಾರ ಅರ್ಪಿಸುತ್ತಾರೆ

ಆ ವೈಭವ ಹೊಂದಿರುವ ನಮ್ಮಾಳ್ವಾರ್ ಎಂಬುವರ ಪಾದದ್ವಯವನ್ನು, ತನ್ನ ಜ್ಞಾನಕ್ಕೆ ಮುಖ್ಯವಾಗಿ ಪೋಷಕಸ್ಥಾನವಾದ ಶಿರಸ್ಸನ್ನು ಅವರಿಗೆ ಸಮರ್ಪಿಸಿ, ಉತ್ಕರ್ಷನೋಟವುಳ್ಳ ಅವರ ನಡೆ ಎಂದೆಂದಿಗೂ ಬೆಳಗುತ್ತಿರಬೇಕು ಎಂಬ ಭಕ್ತಿಯನ್ನು ಸ್ವಾನುಷ್ಠಾನದಲ್ಲಿ ಉಳಿಸಿಕೊಂಡು, ಅವರಲ್ಲಿ ಪರಾಂಕುಶರ ನೋಟ, ನಡೆ, ಮತ್ತು ಸಮಾಜದ ವೈದಿಕಾಭಿಮುಖವಾದ ಪರಿವರ್ತನ ಎಂಬ ಭಾವನೆಯನ್ನು ಮನಸ್ಸಿನಲ್ಲಿ ಉಳಿಸಿಕೊಂಡು, ಚೇತನ ವರ್ಗಕ್ಕೆಲ್ಲ ಸ್ವಜೀವನ, ಪರೋಜೀವನ ಏಕಕಾಲದಲ್ಲಿ ಏರ್ಪಡಬೇಕೆಂದು ಪರಾಂಕುಶರಲ್ಲಿ ಅನುಷ್ಠಾನ ಪೂರ್ವಕವಾಗಿ ಮೊರೆಯಿಡುತ್ತಾರೆ

ಸಮಾಜದಲ್ಲಿ ಒಬ್ಬವ್ಯಕ್ತಿಗೆ ಸೌಖ್ಯ ಏರ್ಪಡಬೇಕಾದರೆ ನಾನಾ ರೀತಿಯ ಬಂಧುಗಳು ಕೂಡಬೇಕು ಜನ್ಮಕೊಡಲು ತಾಯಿ, ಜನ್ಮಕ್ಕೆ ಕಾರಣವಾಗಿರಬೇಕಾದ ವಸ್ತು, ತಂದೆ ಆದ್ದರಿಂದ ಉತ್ಪನ್ನವಸ್ತುವಿಗೆ ರಕ್ಷಣೆ ನೀಡಬೇಕಾದುದು ಪಿತೃಕರ್ತವ್ಯ ಅನಂತರ ಜನ್ಮತಾಳಿದ ವ್ಯಕ್ತಿಗೆ ಭೋಗಕ್ಕೆ ಸ್ತ್ರೀಸಂಗ ಅಂತೆಯೇ ಶುಶ್ರೂಷೆಗೆ ಮಕ್ಕಳು (ತನಯಾಃ), ಇವೆಲ್ಲಕ್ಕು ಸ್ವಾಸ್ಥ್ಯವಿರಬೇಕಾದರೆ ಐಶ್ವರ್ಯ (ವಿಭೂತಿಃ) ಯಾರಿಗೂ ಯಾವವಿದದಲ್ಲೂ ಲೋಪವಿರಬಾರದು ಗೋಚರವಾಗದೆ ಬೇಕಾಗಿರುವ ಸಕಲವೂ (ಸರ್ವಂ), ಒಬ್ಬರೇ ಒಬ್ಬರು ಉದಾಸೀನ ಮಾಡಿದರ ಅನ್ಯಗತಿಯಿಲ್ಲ (ಯದೇವ ನಿಯಮೇನ) ತನಗೂ ತನ್ನ ಸಂಬಂಧವುಳ್ಳ ಇತರರಿಗೂ (ಮದನ್ವಯಾನಾಂ) --ಈ ಪದದಲ್ಲಿ ಯಾಮುನಾಚಾರ್ಯರ ಆಸ ಅಪರಿಮಿತ ಅನ್ವಯ ಎಂದರೆ ಆತ್ಮಭಾವನೆ ಅವನಲ್ಲಿರುವುದು ಆ ಭಾವನೆ ಹರಿಯುವೆಡೆಯಲ್ಲಿ ಪರಾಂಕುಶರ ರಕ್ಷಣೆ ನಿಯತ ಇಂದ ವೈಭವಯುತವಾದ (ಆದ್ಯಸ್ಯ) -- ಅಕಾರವಾಚ್ಯನಾದ ಭಗವಂತ, ಉಕಾರವಾಚ್ಯಳಾದ ಶ್ರೀದೇವಿ, ಮಕಾರ ವಾಚ್ಯನಾದ ಸೇನಾದಿಪತಿ ವಿಷ್ವಕ್ಸೇನ -- ಅನಂತರ ತಲೆದೋರಿರುವ ವ್ಯಕ್ತಿ ಪರಾಂಕುಶರು -- ಅಂದರೆ ಪರಮಾತ್ಮನಿಗೆ ಅಂಕುಶ -- ಅಂದರೆ ಚೇತನನಿಗೆ ಸ್ವಾತಂತ್ರ್ಯ ಕೊಟ್ಟು ಅನಂತರ ಅವನ ನಡೆ ವಕ್ರವಾದರ ಶಿಕ್ಷೆಗೆ ಗುರಿಪಡಿಸುವುದು ದುರ್ವ್ಯಾಪಾರ ಹೀಗೆ ಚೇತನನನ್ನು ಬಿಟ್ಟುಕೊಟ್ಟು ಖಂಡಿಸುವ ಬದಲು ಅವನನ್ನು ಬಿಟ್ಟುಕೊಡದೆ ಉಳಿಸಿಕೊಳ್ಳುವುದು ಪರಮಾತ್ಮನ ಪರಮತತ್ವ ಎಂಬ ಭಾವನೆಯನ್ನು ಪರಮಾತ್ಮನಿಗೆ ತಿಳಿಯಪಡಿಸಿ, ಸಾಂಸಾರಿಕದುಃಖವು ಭಗವಂತನ ಉಪೇಕ್ಷಾಫಲ ಚೇತನರು ಸ್ವತಂತ್ರರಲ್ಲದುದರಿಂದ ವಸ್ತುತಃ ಅವರು ಶಿಕ್ಷೆಗೆ ಅನರ್ಹರು ಸನ್ನಿವೇಶಜನಿತವಾದ ದೋಷವು ಸ್ವಭಾವಕ್ಕೆ ಸಂಬಂಧವಟ್ಟುದಲ್ಲ ಸ್ವಭಾವಸಂಬಂಧವು ಅಳಿಸುವಂತಿಲ್ಲ ಆದ್ದರಿಂದ ತನ್ನವೆಂಬ ಭಾವನೆಯನ್ನು ಕೀಟಲೆಗಾದರೂ ಮರೆಯದೆ ಚೇತನನನ್ನು ತನ್ನ ವೈಭವವಾಗಿ ಉಪಯೋಗಿಸಿಕೊಳ್ಳಬೇಕಾದುದು ಎಂದು ಪರಮಾತ್ಮನಿಗೆ ತನ್ನ ಸಹಜಧರ್ಮವನ್ನು ಒತ್ತಿ ನೆನಪಿಗೆ ತರುವ ಯೋಗ ನಮ್ಮಾಳ್ವಾರರಿಗೆ ಸೇರಿದುದು

'ನಂಬಿನೇನ್ ಪಿರರ್ ನನ್ಪೊರುಳ್' --ಎಂಬ ಮಧುರ ಕವಿಗಳ ಸೂಕ್ತಿಯಂತೆ ಅಹಂಭಾವನೆಯನ್ನು ತೊರೆದು, ಕೇವಲ ಜ್ಞಾನದ್ರವ್ಯವಾಗಿ ಉಳಿದುಕೊಂಡು, ಪ್ರತ್ಯೇಕತೆಯು ಸಾಧ್ಯವಲ್ಲದುದರಿಂದ ಈಶ್ವರನಿಗೆ -- ಅಹಂ ಎಂದರೆ ಅಚೇತನಕ್ಕಿಂತ ಬೇರೆಯಾದ ತಾನು ಚೇತನನು ಪರಮಾತ್ಮನ ಉಪಯೋಗಕ್ಕಾಗಿ ಏರ್ಪಟ್ಟಿರುವ ವಸ್ತು ಎಂಬ ರಹಸ್ಯ ಸಂಬಂಧಜ್ಞಾನವು ನಾರಾಯಣ ಶಬ್ದದಲ್ಲಿ ಸ್ಪಷ್ಟವಾಗಿ ತಿಳಿಯಬರುವುದರಿಂದ, ಅವನನ್ನು ಕುರಿತು ತತ್ವಜ್ಞರಾದ ನಮ್ಮಾಳ್ವಾರ್ ಒಂದು ಅಂಕುಶವನ್ನಿಡುತ್ತಾರೆ

ಚೇತನನನ್ನು ಹೊರದೂಡಿ ಈಶ್ವರನ ಹಿರಿಮೆಯನ್ನು ಕಾಣುವುದ

ಕ್ಕಿಂತ ಮಿಗಿಲಾದುದು ಅವನನ್ನು ಉಳಿಸಿಕೊಂಡು ಅವನ ಮೂಲಕವೂ ತನ್ನ ಹಿರಿಮೆಯನ್ನು ಪ್ರಕಾಶಪಡಿಸುವುದು ಉತ್ತಮೋತ್ತಮ ಈಶ್ವರ ಶಬ್ದಕ್ಕೆ ಇದೇ ಸಹಜವಾದ ವೃತ್ತಿ ಬ್ರಹ್ಮೈವ ಇದಂ ಸರ್ವಂ, ಈಶಾವಾಸ್ಯಮಿದಂ ಸರ್ವಂ -- ಎಂಬಂತೆ ಎಲ್ಲವೂ ಬ್ರಹ್ಮಕ್ಕೆ ಸೇರಿದ ಪದಾರ್ಥ ಚೇತನನೂ ಸೇರಿದವನು ಅವನ ವಿಶೇಷ ಲಕ್ಷಣವು ಜ್ಞಾನ ಅದರಲ್ಲಿ ಈ ಭಾವನೆ ಎಂದೆಂದೂ ಮೂಡಿರಬೇಕು ಹಾಗಲ್ಲದೆ ಅದರಲ್ಲಿ ಲೋಪ ತೋರುವದು ಚೇತನನ ದೋಷವಲ್ಲ ಪರಬ್ರಹ್ಮನ ಮಾಯೆ ಸಂಕಲ್ಪವಿಶೇಷ ಆದ್ದರಿಂದ ವಿಶ್ಲೇಷ ಜನಕ ಸಂಕಲ್ಪವನ್ನು ಬದಿಗಿಟ್ಟು ಸಂಶ್ಲೇಷವನ್ನೇ ಉಳಿಸಿಕೊಳ್ಳುವ ಸಂಕಲ್ಪವನ್ನು ಬಯಸಿ, ಅದರ ಅರಿವು ಎಂದೆಂದಿಗೂ ಮರೆಯದಂತೆ ಕರುಣಿಸಬೇಕೆಂಬ ಬಲಾತ್ಕಾರಪೂರ್ವದ ಫಲವಾಗಿ ಶಠಕೋಪರು ಪರಾಂಕುಶರಾಗಿ ಪರಿವರ್ತಿಸುತ್ತಾರೆ ಅವರ ಪ್ರಬಂಧದಲ್ಲಿ ಆಮೂಲಾಗ್ರವಾಗಿ ವಿಶ್ಲೇಷವ್ಯಥೆ, ಸಂಶ್ಲೇಷದ ಸೌಭಾಗ್ಯ -- ಇವೆರಡೆ ಪ್ರಧಾನವಾಗಿವೆ ಎಂಬುದನ್ನು ಇಲ್ಲಿ ಸ್ಮರಿಸಬಹುದು ಜೀವಾತ್ಮನನ್ನು ಪರಮಾತ್ಮನ ಸೇವೆಗೆ ಒಯ್ಯುವರೀತಿ ಪರಾಂಕುಶರಿಗೆ ಸೇರಿದ್ದು

ಲೋಕದಲ್ಲಿ ಒದಗಬೇಕಾದ ಸಮಸ್ತ ಬಂಧುಗಳೂ ಪರಾಂಕುಶರೇ, ಮತ್ತೊಬ್ಬರಲ್ಲ ಇದಲ್ಲದೆ ಬೇರೆ ಮಾರ್ಗವಿಲ್ಲ ಅವರು ಎಲ್ಲರಿಗಿಂತಲೂ ಪ್ರಪನ್ನರು ಭಗವದ್ವೈಭವವ್ಯಕ್ತಿ (ಆದ್ಯಸ್ಯ), ನಮ್ಮ ಕುಲಕ್ಕೆ ಮಾರ್ಗದರ್ಶಿಯಾಗಿ ಕಂಕಣಬದ್ಧರಾಗಿರುವ ನಮ್ಮಾಳ್ವಾರ್ (ನಃ ಕುಲಪತಿ) ಇವರು ಪಗಡೆ ಪುಷ್ಪಹಾರವಾಗುಳ್ಳವರು ಆ ಪುಷ್ಪಬಾಡಿದಂತೆಲ್ಲಾ ಸುಗಂಧ ಹೆಚ್ಚುತ್ತದೆ ಅವರು ಈ ಸಂಪತ್ತನ್ನು ಅಲಬ್ಧಲಾಭವಾಗಿ ಶಾಶ್ವತವಾಗಿ ಪಡೆದಿರುತ್ತಾರೆ ಅಂದರೆ ಸಂಸಾರದಲ್ಲಿ ಪರಮಪದವಲ್ಲದೆ ಮತ್ತೊಂದು ಅವಸ್ಥೆ ಅವರಿಗೆ ಕಾಣುವುದಿಲ್ಲ ಕಂಡರೂ ಆಕರ್ಷಣೆಯಿಲ್ಲ ಇಂದ ಅನುಪಮಯೋಗ ವಿಶಿಷ್ಟರಾದ ಪರಾಂಕುಶರ ಅಂಘ್ರಿಯುಗಳವನ್ನು ಅಂದರೆ ಪದ್ಧತಿಯನ್ನು ತೋರಿಸಬಲ್ಲ ಪಾದಯುಗಳಕ್ಕೆ ಪ್ರಭಾವಪರವಶರಾಗಿ ತಮ್ಮ ಶಿರಸ್ಸನ್ನು ಅರ್ಪಿಸಿ ನಮಿಸುತ್ತಾರೆ

ಶ್ಲೋಕ 6 ಯನ್ಮೂರ್ಧ್ನಿ ಮೇ ಶ್ರುತಿಶಿರಸ್ಸು ಚ ಭಾತಿ ಯಸ್ಮಿನ್
ಅಸ್ಮನ್ ಮನೋರಥ ಪದಃ ಸಕಲಃ ಸಮೇತಿ
ಸ್ತೋಷ್ಯಾಮಿ ನಃ ಕುಲಧನಂ ಕುಲದೈವತಂ ತತ್
ಪಾದಾರವಿಂದಮ್ ಅರವಿಂದ ವಿಲೋಚನಸ್ಯ

ಭಾವಾರ್ಥ -- ನನ್ನ ಶಿರಸ್ಸಿನಮೇಲೂ, ಉಪನಿಷತ್ತುಗಳಲ್ಲಿಯೂ ಯಾವ ಪಾದಾರವಿಂದಗಳು ಪ್ರಕಾಶಿಸುತ್ತಿವೆಯೋ, ಯಾವ ಪಾದಗಳಲ್ಲಿ ನಮ್ಮ ಇಚ್ಛೆಗೆ ಗೋಚರವಾಗುವ ಸಮಸ್ತವೂ ಒಟ್ಟುಗೂಡುತ್ತದೆಯೋ, ಯಾವಪಾದಾರವಿಂದವೇ ನಮ್ಮ ಕುಲಧನವೂ ಕುಲದೈವತವೂ ಆಗಿದೆಯೋ, ಅಂತಹ, ಅರವಿಂದಲೋಚನನಾದ ನಾರಾಯಣನ ಪಾದಾರವಿಂದಗಳನ್ನು ಈಗ ನಾನು ಸ್ತುತಿಸುವೆನು

ವಿಶೇಷಾರ್ಥ -- ವಿಷ್ಣುವಿನ ಪಾದಾರವಿಂದವು, ಶ್ರುತಿಯ ಶೀರ್ಷಭಾಗವಾದ ವೇದಾಂತದಲ್ಲಿಯೂ, ನಾರಾಯಣ ಮಂತ್ರದಲ್ಲೂ, ತನ್ನ ಉತ್ತಮಾಂಗದಲ್ಲೂ ಏಕಪ್ರಕಾರವಾಗಿ ಹೊಳೆಯುತ್ತಿದೆ ಆದ್ದರಿಂದ ತನ್ನ ಶಿರಸ್ಸಿನಲ್ಲಿ ತೋರುವ ಪಾದವೂ, ವೇದದಿಂದ ಹೊರಬೀಳುವ ಪಾದವೂ ಬೇರೆ ಬೇರೆಯಲ್ಲ ಆದ್ದರಿಂದ ಸರ್ವ ಸಮ್ಮತವಾದ ವಸ್ತು ಭಗವಂತನ ಪಾದಾರವಿಂದ ಈ ಪಾದಾರವಿಂದದಲಾಭವು ವೇದದ ಮೂಲಕವಾಗಿಯೂ ಪಡೆಯಬಹುದು ಅಥವಾ ಸಾಕ್ಷಾತ್ತಾಗಿಯೂ ಪಡೆಯಬಹುದು ಅಂದಮೇಲೆ ಬ್ರಹ್ಮಶಬ್ದಕ್ಕೆ ವೇದಪ್ರತಿಪಾದ್ಯನಾದ ಪರಮಾತ್ಮನು, ಅವನ ಪ್ರತಿಪಾದಕವಾಗಿ ಅರ್ಥವಾಗಿ ಶಬ್ದ ಮತ್ತು ಅರ್ಥಬ್ರಹ್ಮ ಎಂಬ ಎರಡು ಬಗೆಯಾಗಿ ಕಾಣುತ್ತದೆ ಶಬ್ದ ಪೂರ್ವಕವಾಗಿ ಅರ್ಥ ಬ್ರಹ್ಮಪ್ರಾಪ್ತಿ ಸಾಧನ ಶಬ್ದ ಗುರಿ ಅರ್ಥ ಅಂದರೆ ಬ್ರಹ್ಮಜ್ಞಾನಕ್ಕೆ ಸಾಧನ ಶಬ್ದಬ್ರಹ್ಮ ಇದು ಲೌಕಿಕ, ಬ್ರಹ್ಮಾನುಭವಕ್ಕೆ ವಿಶದೀಕರಣವಾದುದು ಅನುಭವೋತ್ತರ ಶಬ್ದ ಇದು ವೈದಿಕ ಇವೆರಡನ್ನೂ ಕಂಡ ನಾಥಮುನಿಗೆ ಹಿಂದಿನವರೂ, ತರುವಾಯ ಕಾಣಿಸಿಕೊಂಡವರೂ ಉಭಯ ವೇದಾಂತ ಎಂದು ಪರಿಗಣಿಸಿ ಅದರಲ್ಲಿ ಅನುಪಮ ರೂಪವಾದ ಭಾಗಕ್ಕೆ ಶ್ರೀಮದ್ವೇದವೆಂಬ ಹೆಸರಿಟ್ಟು ಅವನ್ನು ಜೀವನಿಗೆ ಉಳಿಸಿಕೊಟ್ಟಿರುತ್ತಾರೆ

ಈ ಪರಮಾತ್ಮನಲ್ಲಿ ತನ್ನ ಶಿರಸ್ಸನ್ನು ಒಪ್ಪಿಸಿದರೆ, ಅವನ ಪಾದಗಳನ್ನು ತನ್ನ ತಲೆಯಮೇಲೆ ಹೊತ್ತರೆ, ತನ್ನ ಬಯಕೆಗಳೆಲ್ಲ ಪೂರ್ತಿಯಾಗುತ್ತದೆ ಈ ನಿಶ್ಶೇಷವಾದ ಸಕಲ ಆಶೋತ್ತರಗಳೂ ಅವನ ಪಾದಾರವಿಂದ ಮುಟ್ಟಿದರೆ ನೈರ್ಮಲ್ಯದಿಂದೊಡಗೂಡಿ, ಸಂಶಯವಿಲ್ಲದೆ ಪೂರ್ತಗೊಳ್ಳುತ್ತವೆ ಅಂದ ಪಾದಾರವಿಂದಗಳನ್ನು ತಾನು ತನ್ನ ತಲೆಯ ಮೇಲೆ ಧರಿಸುತ್ತೇನೆ ಎಂಬುದಾಗಿ ಹೇಳಿದ್ದಾರೆ ಅಲ್ಲದೆ ಉಳಿದ ಎಲ್ಲ ಚೇತನರಿಗೂ ಏಕಪ್ರಕಾರವಾಗಿ ಭೋಗಸಾಧನವಾಗಿವೆ ಅಷ್ಟೇ ಅಲ್ಲದೆ ತನಗೆ ಸ್ವಾಮಿಯಾಗಿದ್ದು ಆ ಭೋಗಕ್ಕೆ ತನ್ನನ್ನು ಪ್ರಚೋದಿಸುವ ಅಭಿಮಾನಶೀಲ ವಸ್ತು ಪಾದಾರವಿಂದ ಭಗವಂತನ್ನು ಕಣ್ಣುಗಳಲ್ಲಿ ತನ್ನನ್ನು ಕಂಡು ಹಿಡಿದು ಕೈಬಿಡದೆ ಎಳೆ ಮಕ್ಕಳುತ್ತಾನೆ ಆ ಸಾಧನವೂ ಪಾದವೇ ಅಲ್ಲಿ ಹೊರಟ ಮಧುಪಾನದಿಂದ ತಾನು ದುಂಬಿಯಂತೆ ಸದಾ ಝೇಂಕಾರ ಮಾಡುತ್ತಾ 'ಏಕಸ್ವಾಮಗಾಯನ್ನಾಸ್ತೇ -- ಹಾಉ ಹಾಉ ಹಾಉ -- ಅಹಮನ್ನಂ -- ಅಹಮನ್ನಂ -- ಅಹಮನ್ನಂ -- ಅನ್ನಮದಂತಂ ಅದ್ಮಿ' -- ಎಂದು ಜ್ಞಾನಾನಂದ ಮಯನಾದ ಪರಮಾತ್ಮನಿಗೆ ಭೋಗವಸ್ತುವಾಗಿ ಉಳಿದುಕೊಂಡು, ಆ ಪರವಸ್ತು ಭೋಗವಸ್ತುವನ್ನು ಅನುಭವಿಸುತ್ತಾ ಜೀವನ ಸಾರ್ಥಕ್ಯವಾಗುತ್ತದೆ

ಭಗವಂತನೊಬ್ಬನೇ ಪರದೇವತೆ ಅವನ ದಿವ್ಯ ವಿಗ್ರಹದಲ್ಲಿ ಶಿರೋಭಾಗವು ದೇವತಾಂತರವನ್ನು ಹೊರದೂಡುತ್ತದೆ ಪಾದಾರವಿಂದವು ಕಮಲದಂತೆ ಕೆಸರಿನಲ್ಲಿದ್ದರೂ ಅದು ತಗಲದಂತೆ ಅದರಿಂದ ಕಲುಷಿತನಾಗದೆ ಭಗವಂತನ ಪಾದಾರವಿಂದದಲ್ಲಿ ನಾಭಿಕಮಲದಲ್ಲಿ ಚತುರ್ಮುಖ ಹುಟ್ಟಿದಂತೆ ಹುಟ್ಟಿ ಹರಿಯುವ ಮಧುರ ರಸಪಾನಮಾಡಿ ತೃಪ್ತಿಪಟ್ಟು, ಅದಕ್ಕೆ ತೃಪ್ತಿ ಇಲ್ಲದೆ 'ಸದಾ ಪಶ್ಯಂತಿ' ಎಂಬುದಾಗಿ ಭಗವದ್ಧ್ಯಾನದಲ್ಲಿ ಲೀನನಾಗಿ, ಅವನ ಪಾದಗಳಿಂದ ಹೊರಟ ಮಧುರಸವನ್ನು ಆಸ್ವಾದಿಸಿ, ನಿರಂತರವಾದ ಆನಂದತೃಪ್ತಿಗಳನ್ನು ಪಡೆದು, ಅದು ಕೈಬಿಡದೆ ಸದಾಕಾಲವೂ ಇರಬೇಕೆಂಬ ಅನುಭವದ ಏಕರೂಪತೆ ಮತ್ತು ನಿತ್ಯತೆಯನ್ನು ಬಳಸಿಕೊಂಡು ಇರಬೇಕೆಂಬ ಆಸೆಯಿಂದ ಯಾಮುನಾಚಾರ್ಯರು ತಮ್ಮ ಉಪಯೋಗಕ್ಕೆ ಬಳಸಿಕೊಂಡು ಲೋಕಕ್ಕು ಹರಡುತ್ತಾರೆ ಕ್ಲೇಶಕರವಾದರೂ ಅತ್ಯುತ್ತಮವಾದುದರಿಂದ, ಕ್ಲೇಶ ತಗಲದಂತೆ ಅನುಭವಿಸುವರೀತಿಯನ್ನು -- ಸುದುಗ್ರಹಂ ಸ್ತೋತ್ರ ಯಾಮಾಸ -- ಎಂಬಂತೆ ಈ ಭೋಗವು ಅಡ್ಡಿ ಅಸಡ್ಡೆಯಿಲ್ಲದೆ ಎಲ್ಲರಿಗೂ ದೊರಬೇಕು ಎಂದು ಅನುಗ್ರಹಿಸಿದ್ದಾರೆ ✪

## ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ, ತಿರುಮಲೆ

# ಉದಯಾಸ್ತಮಾನ ಸರ್ವ ಸೇವಾ ಯೋಜನೆ

ವರ್ಷಕ್ಕೊಂದು ದಿನ ಶ್ರೀ ವೆಂಕಟೇಶ್ವರಸ್ವಾಮಿಯ ಎಲ್ಲ ಸೇವೆಗಳ ವೆಚ್ಚವನ್ನೂ ಭರಿಸುವ ಭಕ್ತರಿಗಾಗಿ ದೇವಸ್ಥಾನದಲ್ಲಿನ ಉದಯಾಸ್ತಮಾನ ಪರ್ಯಂತ ಎಲ್ಲ ಸೇವೆಗಳನ್ನೂ ಮಾಡಿಸಲು ಅವಕಾಶ ಕಲ್ಪಿಸಿಕೊಡುವ ಒಂದು ವಿಶೇಷ ಯೋಜನೆಯನ್ನು ರೂಪಿಸಲಾಗಿದೆ ಈ ಸರ್ವಸೇವೆಯಲ್ಲಿ ಸುಪ್ರಭಾತ, ತೋಮಾಲೆ, ಅರ್ಚನೆ, (ಮೂರು ಬಾರಿ), ನೈವೇದ್ಯ ಹಾಗೂ ಮತ್ತಿತರ ಸೇವೆಗಳು ಸೇರಿವೆ ಈ ಯೋಜನೆಯ ಪರಿಧಿಯಲ್ಲಿ ಆರ್ಜಿತ ಸೇವೆಗಳಾದ ಕಲ್ಯಾಣೋತ್ಸವ, ಊಂಜಲ್‌ಸೇವೆ, ಬ್ರಹ್ಮೋತ್ಸವ, ಕೋಯಿಲ್ ಆಳ್ವಾರ್ ತಿರುಮಂಜನ, ಸಹಸ್ರ ಕಲಶಾಭಿಷೇಕ, ತಿರುಪ್ಪಾವಡ, ವಾಹನಸೇವೆಗಳು ಮೊದಲಾದವು ಬರುವುದಿಲ್ಲ

ಈ ಯೋಜನೆಯ ಹಲವು ವೈಶಿಷ್ಟ್ಯಗಳು ಹೀಗಿವೆ --

* ಶುಕ್ರವಾರಗಳ ಹೊರತು ಇತರೆ ಯಾವುದೇ ದಿನಗಳ ಸರ್ವಸೇವೆಯ ದತ್ತಿಯಾಗಿ ಕಾರ್ಯನಿರ್ವಹಣಾಧಿಕಾರಿ ತಿ ತಿ ದೇ ತಿರುಪತಿ ಇವರಿಗೆ 1 ಲಕ್ಷ ರೂಗಳ ಭಾರತದಲ್ಲಿನ ಯಾವುದೇ ಬ್ಯಾಂಕ್‌ನ ಡಿಮಾಂಡ್ ಡ್ರಾಫ್ಟನ್ನು ಕಳುಹಿಸಬೇಕು ಶುಕ್ರವಾರಗಳಲ್ಲಿನ ಸರ್ವಸೇವೆಗಾಗಿ ನಿಗಧಿ ಆಗಿರುವ ದತ್ತಿಯ ಮೌಲ್ಯ ರೂ 3 ಲಕ್ಷ, ಇದರಲ್ಲಿ ಶುಕ್ರವಾರದ ಅಭಿಷೇಕವೂ ಸೇರುವುದು

* ಗೊತ್ತಾದ ದಿನದಂದು ಎಲ್ಲ ಸೇವೆಗಳಿಗೂ ಆರು ಮಂದಿಗೆ ಪ್ರವೇಶ ನೀಡಲಾಗುಲವುದು ಎಂದರೆ ಶುಕ್ರವಾರಗಳ ಹೊರತು ಸುಪ್ರಭಾತ, ತೋಮಾಲೆ, ಸಹಸ್ರನಾಮಾರ್ಚನೆ, ಏಕಾಂತ ಸೇವೆಗಳು ಆಯಾ ದಿನದಲ್ಲಿ ಇಲ್ಲಿನ ಯಾವುದೇ ಸೇವೆಯನ್ನು ಯಾವ ಕಾರಣಕ್ಕಾಗಿಯಾದರೂ ಮುಂದೂಡಲಾಗಿದ್ದಲ್ಲಿ ಅಂತಹ ಸೇವಾ ಪ್ರವೇಶವಿರದು

* ದತ್ತಿ ನೀಡಿದವರ ಹೆಸರನ್ನು ದೇವಸ್ಥಾನದ ಒಳಗಡೆ ಎದ್ದು ಕಾಣುವಂತೆ ಬರೆದು ಪ್ರದರ್ಶಿಸಲಾಗುವುದು ಆ ದಿನದ ಆಸ್ಥಾನದಲ್ಲಿ ಅವರ ಹೆಸರು ಗೋತ್ರಗಳನ್ನು ಹೇಳಲಾಗುವುದು

* ಆ ದಿನದ ಎಲ್ಲ ಆರ್ಜಿತಸೇವೆಗಳನ್ನು ದತ್ತಿ ನೀಡಿದವರು ಹಾಗೂ ಅವರ ಪೈಕಿಯವರು ವೀಕ್ಷಿಸಲು ಅನುಮತಿ ನೀಡಲಾಗುತ್ತದೆ

* ದತ್ತಿ ನೀಡಿದವರಿಗೆ (1) ಶ್ರೀ ವೆಂಕಟೇಶ್ವರಸ್ವಾಮಿಯವರ ಕಲ್ಯಾಣೋತ್ಸವದಲ್ಲಿ ಅಂದು ಬಳಸಲಾದ ಒಂದು ಶೇಷವಸ್ತ್ರ, (2) 25 ಲಾಡು ಹಾಗೂ ವಡೆಗಳನ್ನು ಬಹೂಕರಿಸಲಾಗುವುದು

* ವಸ್ತು, ವಿಷಯಗಳ ದರಗಳು ಅಸಹಜವಾಗಿ ಏರಿದಲ್ಲಿ ದತ್ತಿ ನೀಡಿದವರಿಗೆ ಹೆಚ್ಚಿನ ದತ್ತಿಯನ್ನು ನೀಡಲು ಅವಕಾಶ ನೀಡಲಾಗುವುದು ಒಂದು ಬಾರಿಗೆ 10 ಶತಾಂಶ ದಂತೆ, ದತ್ತಿ ನೀಡಿದವರು ಈ ಹೆಚ್ಚಿನ ಮೊತ್ತವನ್ನು ನೀಡಲು ಮುಂದೆ ಬರದಿದ್ದಲ್ಲಿ ತಿ ತಿ ದೇ ಬೇರೊಂದು ದತ್ತಿಯನ್ನು ಸ್ವೀಕರಿಸಲು ಸ್ವತಂತ್ರವಾಗಿರುತ್ತದೆ ಆಗ ಸೇವೆಗಳನ್ನು ಇಬ್ಬರು ಅಥವಾ ಹೆಚ್ಚಿನ ಗೃಹಸ್ಥರ ಹೆಸರಿನಲ್ಲಿ ನಡೆಸಲಾಗುವುದು ದತ್ತಿ ನೀಡಿದವರಿಗೆ ಸೇವಾ ದಿನವನ್ನು ಮೂವತ್ತು ದಿನಗಳ ಮೊದಲೇ ಸಾಮಾನ್ಯವಾಗಿ ತಿಳಿಸಲಾಗುವುದು

ಇತರ ವಿವರಗಳಿಗೆ ಹಾಗೂ ಸ್ಪಷ್ಟೀಕರಣಕ್ಕೆ ಬರೆಯಿರಿ

**ಕಾರ್ಯನಿರ್ವಹಣಾಧಿಕಾರಿ,**

ತಿ ತಿ ದೇ, ತಿರುಪತಿ

# ಭಾಗವತ ಧರ್ಮಗಳು

--ಅಶೋಕ ಹನುಮಂತರಾವ ಚಚಡಿ.

ಭಾಗವತರು ಎಂದು ಕರೆಯಲ್ಪಡಬೇಕಾದರೆ ಕೆಲವು ಅರ್ಹತೆಗಳು ಇರದೇಕಾಗುತ್ತವೆ ಶ್ರೀ ಭಾಗವತಸಾರೋದ್ಧಾರದಲ್ಲಿ ವಿಷ್ಣುತೀರ್ಥರು ಈ ಭಾಗವತದರ್ಮಗಳನ್ನು ಉಲ್ಲೇಖಿಸಿದ್ದಾರೆ ಅವುಗಳಲ್ಲಿ ಕೆಲವು ಆಯ್ದು ಭಾಗವತಧರ್ಮಗಳನ್ನು ಇಲ್ಲಿ ಕೊಡಲಾಗಿದೆ

1 ಸರ್ವತಃ ಇತಿ ವಿಷಯಗಳ ಬಗ್ಗೆ ಎಲ್ಲ ಬಗೆಯಿಂದಲೂ ಮನಸ್ಸಿನಿಂದ ಆಸಕ್ತಿಯನ್ನು ತಾಳದಿರುವದು

2 ಸಂಗಮಿತಿ ಸಾಧುಗಳಾದ ಭಗವದ್ಭಕ್ತರ ಸಹವಾಸ ಸಮಾಗಮವೇ ಮುಕ್ತಿಗೆ ಸಾಧನವೆಂದು ತಿಳಿದುಕೊಳ್ಳುವುದು

3 ಶೌಚಂ ಶಿಕ್ಷೇತ್ ಅಂತರಂಗದಲ್ಲಿಯೂ ಬಹಿರಂಗದಲ್ಲಿಯೂ ಶುಚಿತ್ವವನ್ನು ಹೊಂದಿರುವುದು

4 ತಪಃ ಶಿಕ್ಷೇತ್ ಮನೋನಿಗ್ರಹವೆಂಬ ಅತ್ಯಂತ ಕಠಿಣ ತಪಸಿನಲ್ಲಿ ಯಾವಾಗಲೂ ತೊಡಗಿರುವುದು

5 ತಿತಿಕ್ಷಾಂ ಶಿಕ್ಷೇತ್ ದುಃಖದ ಉದ್ವೇಗವನ್ನು ತಡೆದು ಮನಸ್ಸು ಉದ್ವಿಗ್ನಗೊಳ್ಳದಂತೆ ನೋಡಿಕೊಳ್ಳುವುದು

6 ಮೌನಂ ಶಿಕ್ಷೇತ್ ಪರಮಾತ್ಮನನ್ನು ಬಿಟ್ಟು ಇತರ ವಿಷಯಗಳಲ್ಲಿ ಮೌನದಿಂದ ಇರುವುದು

7 ಆರ್ಜವಂ ಶಿಕ್ಷೇತ್ ಮನಸ್ಸಿನಲ್ಲಿ ಇದ್ದಂತೆ ನುಡಿಯುವುದು, ನುಡಿದಂತೆ ನಡೆಯುವುದು

8 ಬ್ರಹ್ಮಚರ್ಯಂ ಶಿಕ್ಷೇತ್ ಸ್ತ್ರೀಯರೊಡನೆ ಸರಸ ಸಲ್ಲಾಪ ನೆನಪಿಗೆ ತಂದುಕೊಳ್ಳುವುದು ಮತ್ತೊಬ್ಬರಿಗೆ ಹೇಳುವುದು ಕಾಮುಕ ಕ್ರೀಡೆ ಅವರೊಡನೆ ಏಕಾಂತ ಸಹವಾಸ--ಇವೆಲ್ಲವುಗಳಿಂದ

ದೂರವಿರುವುದು

9 ಅಹಿಂಸಾ ಶಿಕ್ಷೇತ್ ಕ್ರೋಧ ಲೋಭ ಮೋಹ ಮದ ಮತ್ಸರ ಇತ್ಯಾದಿ ದೋಷಗಳಿಗೆ ಕಾಮವೇ ಮುಖ್ಯಕಾರಣ ಈ ಕಾಮ ನಮ್ಮನ್ನು ಆಶ್ರಯಿಸದಂತೆ ನೋಡಿಕೊಳ್ಳುವುದು

10 ಸ್ವಾಧ್ಯಾಯಂ ಶಿಕ್ಷೇತ್ ಸಕಲ ವೇದಗಳು ಭಗವಂತನನ್ನೇ ಪ್ರತಿಪಾದಿಸುತ್ತವೆ ಎಂದು ತಿಳಿದುಕೊಳ್ಳುವುದೇ ಸ್ವಾಧ್ಯಾಯ

11 ಸಮತ್ವಂ ಶಿಕ್ಷೇತ್ ಸುಖದುಃಖ ಮಾನಾವಮಾನ ಮುಂತಾದ ದ್ವಂದ್ವ ಬಾವನೆಗಳಿಂದ ಅಳುಕದೆ ಶ್ರೀಹರಿಯ ಇಚ್ಛೆಯೆಂದು ತಿಳಿಯುವುದು

12 ಸರ್ವತ್ರ ಆತ್ಮೇಶ್ವರಾನ್ವಿಕ್ಷಾಂ ಶಿಕ್ಷೇತ್ ಬಗವಂತನಲ್ಲಿ ಮನಸ್ಸನ್ನು ಒಮ್ಮೆಮಾತ್ರ ನಿಲ್ಲಿಸದೆ ಪದೇ ಪದೇ ನಿಲ್ಲಿಸಲು ಪ್ರಯತ್ನಪಡುವುದು

13 ಕೈವಲ್ಯಂ ಶಿಕ್ಷೇತ್ ಕರ್ತೃತ್ವ ಸ್ವಾಮಿತ್ವ ಭೋಕ್ತೃತ್ವ ಇವುಗಳು ಪರಮಾತ್ಮನ ಆದೀನವೆಂದು ತಿಳಿದುಕೊಳ್ಳುವುದು

14 ಅನಿಕೇತನಮ್ ಶಿಕ್ಷೇತ್ ಒಂದೇ ಸ್ಥಳಕ್ಕೆ ಅಂಟಿಕೊಳ್ಳದೆ ಎಲ್ಲಿ ಭಗವದ್ಭಕ್ತರು ಇದ್ದಾರೋ ಅವರ ಸಂದರ್ಶನಕ್ಕಾಗಿ ಚಲಿಸುವುದು

15 ವಿವಿಕ್ತ ದೇಹದೇರೆ ಆತ್ಮದೇರೆ ಎಂಬ ವಿಚಾರವನ್ನು ಆತ್ಮಗತ ಮಾಡಿಕೊಳ್ಳುವುದು



16 ಚೀರವಸನಂ ಶಿಕ್ಷೇತ್ ಸದಾಸರ್ವದಾ ಶ್ರೀಹರಿಯ ಚಿಂತನಮಾಡುತ್ತ ಕೃತೃತ್ವ ಭೋಕ್ತೃತ್ವ ಸ್ವಾಮಿತ್ವವನ್ನು ಶ್ರೀಹರಿಗೇನೆ ಬಿಟ್ಟುಕೊಟ್ಟು ಮಲಗುವಾಗಲೂ ಕೂಡುವಾಗಲೂ ಶ್ರೀಹರಿಯ ಧ್ಯಾನವನ್ನೆ ಮಾಡುತ್ತ ಪ್ರಾರಬ್ಧಭೋಗಕ್ಕೆ ಮಾತ್ರ ದೇಹವನ್ನು ತೊಡಗಿಸುವುದು

17 ಸಂತೋಷಂ ಶಿಕ್ಷೇತ್ ಯಾವುದೇ ವೃತ್ತಿಯಲ್ಲಿರಲ್ಲಿ ಶ್ರೀಹರಿಯ ಅನುಗ್ರಹರೂಪೇಣ ಪ್ರಾಪ್ತವಾದದ್ದನ್ನು ಸ್ವೀಕರಿಸಿ ಸಂತೋಷ ಚಿತ್ತನಾಗಿರುವುದು

18 ಪರಾರ್ದೇಹಾ ಶಿಕ್ಷಣೆಯಾ ಉಪಾಸನಾದಿಕಾರಿಗಳು ಎರಡು ವಿಧ ಸಿದ್ಧ ಹಾಗೂ ಸಾದಕ ಸಿದ್ಧ ಅದಿಕಾರಿಗಳಿಗೆ ಪರೋಪಕಾರ ಕಾರ್ಯದಲ್ಲಿ ತೊಡಗುವುದೇ ಮುಖ್ಯಕರ್ತವ್ಯ ಸಾದಕನಾದವನು ತನಗೆ ಯೋಗ್ಯ ಆಶ್ರಮ ವರ್ಣ ವಿಹಿತ ಕರ್ಮದಲ್ಲಿ ತನ್ನನ್ನು ತೊಡಗಿಸಿಕೊಳ್ಳಬೇಕು

19 ಸತ್ಯಂ ಶಿಕ್ಷೇತ್ ಅಯದಾರ್ಥಜ್ಞಾನವೇ ಸರ್ವವಿದ ಅನರ್ಥಗಳಿಗೆ ಕಾರಣವಾಗಿದೆ ಆದ್ದರಿಂದ ಸಕಲ ಜೀವಿಗಳ ಅಂತರ್ಯಾಮಿ ಪರಮಾತ್ಮನನ್ನು ತಿಳಿದುಕೊಳ್ಳುವುದೆ ಪರಮ ಸತ್ಯಾನ್ವೇಷಣೆಯಾಗಿದೆ

20 ಅಬಯಂ ಶಿಕ್ಷೇತ್ ಸಕಲದಾನಗಳಲ್ಲಿ ಅಬಯದಾನವು ಶ್ರೇಷ್ಠವೆಂದು ಹೊಗಳಲ್ಪಟ್ಟಿವೆ ಆದ್ದರಿಂದ ಸಕಲ ಪ್ರಾಣಿಗಳಿಗೆ ಅಬಯವನ್ನು ಸೂಚಿಸುವುದು ಅದವಾ ಭರವಸೆ ನೀಡುವುದು ಸರ್ವಶ್ರೇಷ್ಠ ಭಾಗವತದರ್ಮವಾಗಿದೆ

21 ಶಮದಮಾದಪಿ ಶಿಕ್ಷೇತ್ ಶಮ ಎಂದರೆ ಭಗವನ್ನಿಷ್ಠೆ, ದಮ ಎಂದರೆ ಇಂದ್ರಿಯನಿಗ್ರಹ ಗೀತೆಯಲ್ಲಿ ಹೇಳಿದ ಪ್ರಕಾರ ಯಾವನ ಇಂದ್ರಿಯಗಳು ಅಂತರ್ಮುಖವಾಗಿಹುವವ್ರೋ ಅವರೆ ಭಗವಂತನಲ್ಲಿ ನಿಷ್ಠೆಯಿಂದ ಇರಬಲ್ಲರು



# ಪುರಾಣಗ್ರಂಥಗಳಲ್ಲಿ ವೃಕ್ಷಗಳು

---ಶ್ರೀನಿವಾಸ. ಸು. ಮರದ.

ನಮ್ಮ ಭಾರತದೇಶವು ಕೃಷಿ ಪ್ರದಾನ ದೇಶವಾಗಿದೆ ಕೃಷಿಯು ಮಾನವ ಜೀವನದ ಮೂಲಾಧಾರವಾಗಿದೆ ನಮ್ಮ ಬಹುಭಾಗದ ಕೃಷಿ ಅಭಿವೃದ್ಧಿಯು ಮಳೆಯನ್ನೇ ಅವಲಂಬಿಸಿದ ವೃಕ್ಷಗಳಿಂದ ದಟ್ಟವಾದ ಅರಣ್ಯಗಳು ಹೆಚ್ಚು ಮಳೆಯನ್ನು ತರಲು ಸಹಾಯಕವಾಗುತ್ತವೆ ಈ ಕಾರಣ ದಿಂದ ಅರಣ್ಯ ಸಂಪತ್ತನ್ನು ಕಾಪಾಡುವುದು ಅದಶ್ಯವಷ್ಟೇ ಅಲ್ಲ ಹೆಚ್ಚು ವೃಕ್ಷಗಳನ್ನು ಬೆಳೆಸುವುದು ಪ್ರತಿಯೊಬ್ಬ ಮಾನವನ ಅವಶ್ಯ ಕರ್ತವ್ಯವೆನಿಸಿದೆ "ವೃಕ್ಷೋರಕ್ಷತಿ ರಕ್ಷಿತಃ" ಎಂಬಂತೆ ನಾವು ವೃಕ್ಷಗಳನ್ನು ರಕ್ಷಿಸಿದರೆ ಅವು ನಮ್ಮನ್ನು ರಕ್ಷಿಸುವುದು ನಿಶ್ಚಿತ ನಮ್ಮ ಪುರಾಣ ಗ್ರಂದಗಳಲ್ಲಿ ವೃಕ್ಷಗಳ ಬಗೆಗೆ ಅನೇಕ ವಿಷಯಗಳು ವರ್ಣಿತವಾಗಿವೆ ಇದರ ಚಿಕ್ಕ ವಿವೇಚನ ಇಲ್ಲಿದೆ

ಶ್ರೀಮದ್ ಭಾಗವತ ಮಹಾಪುರಾಣದಲ್ಲಿ ವೃಕ್ಷಗಳ ಪ್ರಶಂಸೆಯನ್ನು ಮಾಡಲಾಗಿದೆ--

ಪಶ್ಯತ್ತೈತಾನ್ ಮಹಾಭಾಗಾನ್  
ಪರಾರ್ಥೈಕಾಂತ ಜೀವಿತಾನ್  
ವಾತ ವರ್ಷಾತಪಹಿಮಾನ್  
ಸಹಂತೋ ವಾರಯಂತಿನಃ  
ಅಹೋ ಏಷಾಂ ವರಂ ಜನ್ಮ  
ಸರ್ವಪ್ರಾಣ್ಯುಪಜೀವನಮ್  
ಸುಜನಸ್ಯೇವ ಏಷಾಂ ವೈ  
ವಿಮುಖಾ ಯಾಂತಿನಾರ್ದಿನಃ  
ಪತ್ರಪುಷ್ಪಫಲಚ್ಛಾಯಾ  
ಮೂಲ ವಲ್ಕಲ ದಾರುಬಿಃ  
ಗಂಧ ನಿರ್ಯಾಸ ಭಸ್ಮಾಸ್ಥಿತೋಕ್ಮೈಃ  
ಕಾಮಾನ್ ವಿತನ್ವತೇ

(10--22--32)

ಪರೋಪಕಾರಿಗಳಾದ ಈ ವೃಕ್ಷಗಳನ್ನು ನೋಡಿರಿ ಗಾಳಿ, ಮಳೆ, ಚಳಿಗಳನ್ನು ಸಹಿಸುತ್ತವೆ ಸರ್ವಪ್ರಾಣಿಗಳಿಗೆ ಉಪಜೀವನಕ್ಕೆ ಆದಾರವಾಗಿರುವ ಈ ವೃಕ್ಷಗಳ ಜನ್ಮವೇ ಶ್ರೇಷ್ಠವಾದದ್ದು ಸಜ್ಜನರ ಸಲುವಾಗಿಯೇ ಇವು ಜೀವಿಸುತ್ತವೆ

ಎಲೆ, ಹೂವು, ಹಣ್ಣು, ನೆರಳು, ಕಟ್ಟಿಗೆ ಗಂದ ಮುಂತಾದ ಎಲ್ಲ ಉಪಯುಕ್ತವಾದ ವಸ್ತುಗಳನ್ನು ನೀಡುವ ವೃಕ್ಷಗಳು ನಿಜಕ್ಕೂ ಶ್ಲಾಘನೀಯವಾಗಿವೆ ಇಂದ ವೃಕ್ಷಗಳನ್ನು ಕಾಪಾಡುವುದು ಅವಶ್ಯವಾಗಿವೆ

ಸ್ಕಂಧ ಮಹಾಪುರಾಣದಲ್ಲಿ ವೃಕ್ಷಗಳನ್ನು ದಳಸುವ ಕುರಿತಾಗಿ ಪ್ರಶಂಸ ಹೀಗೆ ಬಂದಿದೆ--

ಯಾವುದೇ ವೃಕ್ಷವನ್ನು ನಟ್ಟು ಶ್ರದ್ಧೆಯಿಂದ ಬೆಳೆಸಿ ಪ್ರತಿನಿತ್ಯ ಅದಕ್ಕೆ ಬೇಕಾಗುವಷ್ಟು ನೀರನ್ನು ಉಣ್ಣಿಸುವವನು ಪುಣ್ಯಬಾಗಿಯಾಗುತ್ತಾನೆ ಎಲ್ಲ ವೃಕ್ಷಗಳಲ್ಲಿ ದೇವತಾಸಾನ್ನಿದ್ಯ ವಿರುತ್ತದೆ ವೃಕ್ಷಗಳಲ್ಲಿ ಇರುವ ದೇವತೆಗಳ ಪಾಲಿಗೆ ವೃಕ್ಷಕ್ಕೆ ಮಾನವನು ಹಾಕುವ ನೀರು ಅಮೃತಪ್ರಾಯ ವಾಗುತ್ತದೆ ವೃಕ್ಷಗಳಿಗೆ ನೀರು ಹಾಕುವುದರಿಂದ ದೇವತೆಗಳಿಗೆ ಅಮೃತ ನೀಡಿದಷ್ಟು ಸಂತೋಷವಾಗುತ್ತದೆ ಇದರಿಂದ ಮನುಷ್ಯನಿಗೆ ಒಳ್ಳೆಯ ಪುಣ್ಯಾಬಿವೃದ್ಧಿ ಉಂಟಾಗುತ್ತದೆ ಚಾತುರ್ಮಾಸ್ಯ ಕಾಲದಲ್ಲಿ ವೃಕ್ಷಗಳು ಮಾನವನು ಹಾಕಿದ ನೀರನ್ನು ಉಂಡು ಅವನಿಗೆ ಸಮೃದ್ಧಿಯನ್ನು ಉಂಟುಮಾಡುತ್ತವೆ

ಬ್ರಹ್ಮದೇವನು ವಟವೃಕ್ಷವನ್ನು ಆಶ್ರಯಿಸಿ ಇರುತ್ತಾನೆ ವಟವೃಕ್ಷದ ಪೋಷಣೆಯಿಂದ ಬ್ರಹ್ಮನು ತೃಪ್ತನಾಗುತ್ತಾನೆ ಸಾವಿತ್ರಿದೇವಿಯು ಎಳ್ಳಿನ ಗಿಡವನ್ನು ಆಶ್ರಯಿಸಿ ಇರುತ್ತಾಳೆ ಇಂದ್ರನು ಗೋದಿದಾನ್ಯದಲ್ಲಿ ಇರುತ್ತಾನೆ

ಎಲ್ಲ ವೃಕ್ಷಗಳಲ್ಲೂ ಗರಿಕೆಯಂದ ಚಿಕ್ಕ ಸಸ್ಯಗಳಲ್ಲಿ ದೇವತೆಗಳ ಅಂಶವಿರುತ್ತದೆ ದೇವತೆಗಳು ವೃಕ್ಷಗಳನ್ನು ಆಶ್ರಯಿಸಿದಾಗ ಅವರ ಪತ್ನಿಯರು ಬಳ್ಳಿಗಳಲ್ಲಿ ಸನ್ನಿಹಿತರಾಗಿ ವೃಕ್ಷಗಳನ್ನು ಆಶ್ರಯಿಸಿಕೊಂಡು ಇರುವರು ಯಾವ ಕಾರಣದಿಂದಲೂ ವೃಕ್ಷಗಳನ್ನು ಉಪೇಕ್ಷಿಸುವುದು, ಕಡಿಯುವುದು ಪಾಪಜನಕವಾದ ಕಾರ್ಯವೆನಿಸುತ್ತದೆ--

ಮಾವಿನ ವೃಕ್ಷದಲ್ಲಿ ಪ್ರಜಾಪತಿಗಳ, ಮಲಯ ವೃಕ್ಷದಲ್ಲಿ ಗಂದರ್ವರ-- ಅಗರು ವೃಕ್ಷದಲ್ಲಿ ಗಣನಾಯಕನ, ವೆತ್ತದ ವೃಕ್ಷದಲ್ಲಿ ಸಮುದ್ರಾಬಿಮಾನಿ ದೇವತೆಗಳ ಪುನ್ನಾಗವೃಕ್ಷದಲ್ಲಿ ಯಕ್ಷರ, ನಾಗ ವೃಕ್ಷದಲ್ಲಿ ನಾಗರ, ಕಂತೋಲ ವೃಕ್ಷದಲ್ಲಿ ಸಿದ್ಧರ, ಹಲಸಿನ ಮರದಲ್ಲಿ ಗುಹ್ಯಕರ, ಮಣಸಿನ ಗಿಡಗಳಲ್ಲಿ ಕಿನ್ನರರ, ಯಷ್ಟೀಮದುವೃಕ್ಷದಲ್ಲಿ ಮನ್ಮದನ, ರಕ್ತಾಂಜನ ವೃಕ್ಷದಲ್ಲಿ ಅಗ್ನಿಯ, ವಿಬೀತರ ವೃಕ್ಷದಲ್ಲಿ ಯಮನ, ಖರ್ಜೂರೀ ವೃಕ್ಷದಲ್ಲಿ ವರುಣ ದೇವತೆಯ, ಪೂಗ ವೃಕ್ಷದಲ್ಲಿ ಹನುಮನ, ಅಶೋಕ ವೃಕ್ಷದಲ್ಲಿ ಕುಬೇರನ, ಬದರೀ ವೃಕ್ಷದಲ್ಲಿ ರುದ್ರನ, ಮಹಾತಾಲ ವೃಕ್ಷದಲ್ಲಿ ಸಪ್ತರ್ಷಿಗಳ, ಬಕುಲ ವೃಕ್ಷದಲ್ಲಿ ಅಮರರ, ಜಂಬೂ ವೃಕ್ಷದಲ್ಲಿ ಮೇಧಾಬಿಮಾನಿದೇವತೆಗಳ ಅಂಶವಿರುವುದು ಈ ಎಲ್ಲ ವೃಕಗಳನ್ನು ಬೆಳೆಸಿ ಸರಿಯಾಗಿ ಪೋಷಿಸಿದವನಿಗೆ ಅನಂತಪುಣ್ಯಪ್ರಾಪ್ತಿಯಾಗುತ್ತದೆ ಒಂದೊಂದೇ ವೃಕ್ಷವನ್ನು ಯಥಾಶಕ್ತಿ ಬೆಳೆಸಿದವರಿಗೂ ಅಷ್ಟಷ್ಟು ತಕ್ಕಫಲ ದೊರೆಯುತ್ತದೆ--

ಪದ್ಮ ಮಹಾಪುರಾಣದಲ್ಲಿ ವೃಕ್ಷಗಳನ್ನು ದಳಸುವವ ಬಗೆಗೆ ಹೀಗೆ ತಿಳಿಸಿದ್ದಾರೆ--

ನದೀ ಹಳ್ಳ ಕೆರೆಕಾಲುವೆ ಮುಂತಾದವುಗಳ ದಡದಲ್ಲಿ ವೃಕ್ಷಗಳನ್ನು ಬೆಳೆಸಿದರೆ ಬರುವ ಫಲ ಇಂತಿಷ್ಟು (ಫಲ) ಎಂದು ಹೇಳಲು ಸಾದ್ಯವಿಲ್ಲ ಜಲಾಶಯದ ಹತ್ತಿರ ಅರಳಿಯಮರ, ಆಲದ ಮರ ಹಾಗೂ ನೆರಳುಕೊಡುವ ಮರಗಳನ್ನು ಬೆಳೆಸಿದರೆ ನೂರು ಯಜ್ಞಗಳನ್ನು ಮಾಡಿದ್ದಕ್ಕಿಂತ ಅದಿಕ ಪುಣ್ಯಬರುತ್ತದೆ ಹಕ್ಕಿಗಳು, ಮಾನವರು, ವೃಕ್ಷಗಳ ಹಣ್ಣುಗಳನ್ನು ತಿಂದು ಗಿಡದ ನೆರಳಿನಲ್ಲಿ ವಿಶ್ರಮಿಸಿ ಆನಂದಪಡುತ್ತಾರೆ ಕಾರಣ ಇಂಥ ವೃಕ್ಷಗಳನ್ನು ನಟ್ಟು ನೀರು ಹಾಕಿ ಬೆಳಸಿದರೆ ಅಕ್ಷಯಫಲ (ಸ್ವರ್ಗ)ವು ಲಬಿಸುತ್ತದೆ ವೃಕ್ಷಗಳ ತೋಪು (ಬನ)ಗಳನ್ನು ನಿರ್ಮಿಸುವವರಿಂದ ಇಹದಲ್ಲಿ ಶುಭವನ್ನು ಹೊಂದಿ ಮುಂದೆ ಸ್ವರ್ಗವನ್ನು ಅನುಭವಿಸುತ್ತಾರೆ

ಗಿಡದ ಹಣ್ಣುಗಳನ್ನು ಹುಳ, ಹಕ್ಕಿ, ಪಶು, ಪಕ್ಷಿ, ವಾನರ ಮುಂತಾದ ಪ್ರಾಣಿಗಳು ಆ ಗಿಡದ ಗುಂಪಿನ ಉಪಯೋಗವನ್ನು ಪಡೆಯುವುದೋ ಅಷ್ಟೇ ಸಂಖ್ಯೆಯ ಜನರು ಮುಂದೆ ಆ ಗಿಡ ಬೆಳಸಿದವರ ಮನೆಯಲ್ಲಿ ಆಳಾಗಿ ಕೆಲಸಮಾಡುತ್ತಾರೆ

ಏವಂ ವೃಕ್ಷಾಃ ಮಹಾಸತ್ವಾಃ  
ಸರ್ವೇತೇ ದೇವರೂಪಿಣಃ  
ತದರ್ಚಾ ಪಿತೃವತ್ ಕಾರ್ಯಾ  
ಶುಶ್ರೂಷಾ ಜಲ ಪಿಂಡಕಂ

ಮೊಡ್ಡ ಮೊಡ್ಡ ವೃಕ್ಷಗಳೆಂದರೆ ದೇವರೇ ಇದ್ದಂತೆ ಪಿತೃಗಳನ್ನು ಪೂಜಿಸುವಂತೆ-- ಆ ವೃಕ್ಷಗಳನ್ನು ಪೂಜಿಸಬೇಕು ಅವುಗಳ ಸೇವೆ, ನೀರು, ಗೊಬ್ಬರ ಕೊಡಬೇಕು ಇದರಿಂದ ಅಶ್ವಮೇದಯಾಗದ ಫಲ ಬರುತ್ತದೆ. ಇದರಂತೆ ನೆಲ್ಲಿ, ಮಣಸೆ, ಬೇವು ಮಾವು ಮುಂತಾದ ವೃಕ್ಷಗಳನ್ನು ಬೆಳೆಸಬೇಕು

ಹೀಗೆ ನಮ್ಮ ಪುರಾಣಗ್ರಂದಗಳಲ್ಲಿ ವೃಕ್ಷಗಳನ್ನು ಬೆಳೆಸುವ ಬಗ್ಗೆ ಅದರಿಂದಾಗುವ ಮಹಾಫಲಗಳ ಬಗ್ಗೆ ಉಲ್ಲೇಖಗಳು ಇರುವುದು ಕಂಡುಬರುತ್ತದೆ

# ಮೋಕ್ಷಧಾಮ ವಾರಣಾಸಿ

ಬದುಕಿನಲ್ಲಿ ಒಂದಾವರ್ತಿಯಾದರೂ ಕಾಶಿ ವಿಶ್ವೇಶ್ವರನ ಸನ್ನಿದಿಗೆ ಹೋಗಿ ಮೋಕ್ಷಪಡಯುವ --ಎಂದೆನ್ನುವುದು ಹಿಂದೂ ಮತಾವಲಂಬಿಯ ಜೀವನದ ಕೊನೆಯಾಸೆ ನಮ್ಮ ಪೂರ್ವಜರು ಸಂಸಾರಿಕ ಬದುಕಲ್ಲಿ ನಿವೃತ್ತಿಗೊಂಡು ವಾನಪ್ರಸ್ತಾಶ್ರಮಿಯಾಗಿ ಕೊನೆಯ ದಿನಗಳನ್ನು ಕಾಶಿಯಲ್ಲಿ ಕ್ಷೇತ್ರನಿವಾಸಿಗಳಾಗಿ ಕಳೆಯುತ್ತಿದ್ದುದುಂಟು ಕಾಶಿಯಲ್ಲಿ ಕೊನೆಯುಸಿರೆಳೆಯುವುದು, ಚಿತಾ ಅಸ್ತಿಗಳನ್ನು ಗಂಗಾಜಲದಲ್ಲಿ ಎಸೆಯಬೇಕೆನ್ನುವುದು ಹಿಂದೂ ಎಂದೆನಿಸುವವನ ಉತ್ಕಟ ಅಬಿಲಾಷೆ ಪೂರ್ವಜರು ಕಾಲ್ನಡಿಗೆಯಿಂದ ಕಾಶಿ ಯಾತ್ರಾಟನೆ ಮಾಡುತ್ತಿದ್ದರು ಆಗ ಈಗಿನಂತ ವಾಹನವಸತಿ ಸೌಲಭ್ಯಗಳಿದ್ದಿಲ್ಲ ಹೋಗಿಬರಲು ಆರು ತಿಂಗಳುಗಳಾದರೂ ಬೇಕಿತ್ತು ಹಿಂದಿರುಗಿ ಬರುವುದೆಂಬ ಭರವಸೆಯೂ ಇರುತ್ತಿದ್ದಿಲ್ಲ ಎಂದೆ ಸಂಸಾರ ತಾಪತ್ರಯ ಮುಗಿದ ನಂತರ ಹೋಗುತ್ತಿದ್ದರು ಊರವರಿಗೆ ಆಪ್ತೇಷ್ಟರಿಗೆ ಬೂರಿದೋಜನ ಉಣಬಡಿಸಿ ತಮ್ಮದ್ದಿನ್ನಾಯಿತು ಎಂದು ಹೋಗುವವರಾಗಿದ್ದರು ಇಂದು ಹಾಗಿಲ್ಲ--ಪದಿನೈದ ದಿನಗಳಲ್ಲಿ ಕಾಶಿಯಾತ್ರೆ ಮಾಡಿ ಸುರಕ್ಷಿತವಾಗಿ ಮನೆಗೆ ಹಿಂದಿರುಗಿ ಬರಬಹುದು ಹಿಂದಿದ್ದಂತೆ ಕಳ್ಳಕಾರರು ರಸ್ತೆ ದರೋಡೆಕೋರ ಹಾವಳಿ ಕಡಿಮಯಾಗಿದೆ

ಕಾಶಿಯಾತ್ರಾರ್ದಿಯಾಗಿ ಬಂದಂತೆಂದರೆ ಹಿಂದಿನ ದಿನಗಳಲ್ಲಿ ಮೋಕ್ಷಕಂಡವನೆಂಬ ಕಾರಣದಿಂದ ಪದೋನ್ನತಿಯ ಅರ್ಹತೆಯ ಸೂಚ್ಯಾರ್ದವಾಗಿ ಅವನನ್ನು ಊರವರು ಮಂಗಳ ವಾದ್ಯ ಬಾರಿಸುತ್ತ ಶ್ರೀಮದ್ಗಾಂಭೀರ್ಯದ ಮೆರವಣಿಗೆಯಲ್ಲಿ ಕರೆತರುವ ವಾಡಿಕ ಇತ್ತು. ಬಂದನಂತರ ಕಾಶಿಯಾತ್ರಿಯ ಪಾದಪೂಜೆಮಾಡಿ ಅವರ ನೀರನ್ನು ತಲಗ ಸಂಪ್ರೋಕ್ಷಣೆ ಮಾಡಿಕೊಳ್ಳುತ್ತಿದ್ದರು



ವಾರಣಾಸಿಯಲ್ಲಿ ಗಂಗಾನದೀತೀರ

## ಮಹಾಸ್ಮಶಾನ :

ಸ್ಕಂದಪುರಾಣ ೧೫ ಸಾವಿರ ಶ್ಲೋಕಗಳಲ್ಲಿ ಕಾಶಿ ವೈಬವವನ್ನು ಮೆರೆಯಿಸಿದೆ ಕಾಶಿಯಲ್ಲಿ ಪರಮೇಶ್ವರನು ಆಡಿಸಿದ ಲೀಲಾ ಮಹಿಮೆ, ಒಳಗೊಂಡಿದೆ ನಾರಾಯಣ ಭಟ್ಟರು ರಚಿಸಿರುವ ತ್ರಿಸ್ಥಲ ಪ್ರಬಂದದಲ್ಲಿ ಗಯಾ ಪ್ರಯಾಗಾ, ಕಾಶಿ ಸಮಾನವಾಗಿರುವ ಮೂರು ಪುಣ್ಯಸ್ಥಳಗಳೆಂದು ಹೇಳಿರುವದು ಇಲ್ಲಿ ಪುರಾಣ ಕಾಲದಲ್ಲೆ ಅಸ್ಪೃಶ್ಯತ ಮೂಲೋತ್ಪಾಟನೆಗೊಂಡಿತೆಂದಿದ್ದಾನೆ ಗೌತಮ ತನ್ನ ಅನುಯಾಯಿಗಳಿಗೆ ಇಲ್ಲೇ ಮೊದಲು ಉಪದೇಶ ನೀಡಿದನು ವೇದ ಪುರಾಣ ವೀರಕಾವ್ಯ ಸಾಹಿತ್ಯಾದಿ ಪ್ರವಾಸಿ ಕದನಗಳಲ್ಲಿ ಶ್ರೀಕ್ಷೇತ್ರ ಕಾಶಿಯ ಕುರಿತಂತೆ ವಿಪುಲ ಮಾಹಿತಿ ಇದೆ

ಕಾಶಿ ಭಾರತೀಯ ಸಂಸ್ಕೃತಿಯ ಕಿರುರೂಪವೆತ್ತ ಪುಣ್ಯದಾಮ, ಆದುನಿಕತಯ ಗಾಳಿಯ ಸೋಂಕು ಈ ಸ್ಥಳದ ವೈದಿಕ ಹಾಗೂ ಸಾಂಸ್ಕೃತಿಕ ಬಾರತೀಯ ಪರಂಪರೆಯನ್ನು ಕಲುಷಿತಗೊಳಿಸದಿರುವುದು ಪರಮಾಶ್ಚರ್ಯ, ಬಕ್ತವತ್ಸಲ ಪರಮೇಶ್ವರನ ನಿತ್ಯಸಾನ್ನಿದ್ಯ ಹಾಗೂ ಪಾಪನಾಶಿನಿ ಗಂಗಯ ನಿರಂತರ ಹರಿವುಗಳಿಂದಾಗಿ ಕಾಶಿ ಪುಣ್ಯದಾಮ ಕಾಶಿಗ ಹಲವು ಹೆಸರುಗಳಿವ ಗಂಗಯ ಉಪನದಿಗಳಾದ, ವರುಣ ಮತ್ತು ಅಸಿ ಕಾಶಿ ದ್ವೀಪವನ್ನು ಸುತ್ತಗಟ್ಟಿರುವುದರಿಂದ ವಾರಣಾಸಿ ಎಂಬ ಸ್ಥಳನಾಮ ಬಂದಿದೆ ಬದುಕಿಗ ಮೋಕ್ಷಕಾಣಸಲೆಂದು ದಿನ



ವಾರಣಾಸಿಯ ವಸ್ತು ಸಂಗ್ರಹಾಲಯ

ಆರ್.ಜಿ. ಶಾನಭಾಗ.

ನಿತ್ಯ ಸಹಸ್ರಾರು ಶವಗಳ ದಹನ ಇಲ್ಲಿ ನಡೆಯುವುದು ನಂತರ ಶವವನ್ನು ಗಂಗಾ ಜಲದಲ್ಲಿ ಎಸೆಯುವರು, ಶವ ಸಂಸ್ಕಾರ ಪೂರೈಸಲಾಗದೆ ಶವವನ್ನು ಜಲದಲ್ಲಿ ವಿಸರ್ಜಿಸುವರು ಇವರಿಂದ 'ಕಾಶಿ ಮಹಾಸ್ಮಶಾನ' ಶಿವನು ಇಲ್ಲಿ ಸ್ಮಶಾನವಾಸಿಯಾಗಿದ್ದಾನೆ ವಿಶ್ವೇಶ್ವರನಿಗೆ ನಿತ್ಯಪೂಜೆಯ ಕಾಲದಲ್ಲಿ ವಿಭೂತಿ ಲೇಪಿಸಲು ಶವಸಂಸ್ಕಾರದ ಬೂದಿಯನ್ನು ಒಯ್ಯುವರು ೧೯೫೬ ರ ವರೆಗೆ ವಾರಾಣಸಿಗೆ ಬನಾರಸ ಎಂದು ಕರೆಯುತ್ತಿದ್ದರು ಬನಾರಸ, ವಾರಾಣಸಿ ಪದ ಅಪಭ್ರಂಶಗೊಂಡಾದ ಹೆಸರು

## ಪುಣ್ಯಸ್ನಾನ ಸ್ಥಳ (ಘಾಟ) :

ಅರ್ದಚಂದ್ರಾಕಾರದಲ್ಲಿರುವ ಕಾಶಿಯ ಗಂಗೆಯ ತಟದ ಮೇಲೆ ಪುಣ್ಯಸ್ನಾನಮಾಡುವ ೬೪ ಘಾಟಗಳಿವೆ ಘಾಟ ಎಂದರೆ ಬಯಲು ಪುಣ್ಯಸ್ನಾನಗೃಹಗಳಾಗಿವೆ ಗಂಗೆಯ ಜಲ ಹಾಗೂ ಘಾಟಿನ ನೆಲದ ಮೇಲೆ ಪರಶಿವನು ನಿಂತ ಪುಣ್ಯಧಾಮಗಳೆಂದು ಭಕ್ತ ಭಜಕರ ಭಾವನೆ, ನಂಬಿಕೆಗಳಾಗಿವೆ ಪ್ರತಿಯೊಂದ ಘಾಟಿನ ಸುತ್ತಣ ಪೌರಾಣಿಕ ಕದೆಗಳು ಹೆಣೆದುಕೊಂಡಿವೆ ಪುಣ್ಯಸ್ನಾನ, ದಾನ, ಪಿಂಡಪ್ರದಾನ, ಅಂತ್ಯಸಂಸ್ಕಾರ ಹಾಗೂ ದೇವತಾರ್ಚನೆಯ ಕೆಲಸಗಳನ್ನು ಪಂಡಾಗಳು ಇಲ್ಲಿ ನೆರವೇರಿಸಿಕೊಡುವರು ಪಂಡಾಗಳೆಂದರೆ ಬಂದ ಯಾತ್ರಿಗಳಿಗೆ ಮಾರ್ಗದರ್ಶನ ಮಾಡಿಸುವ ಕ್ಷೇತ್ರ ಪುರೋಹಿತರು

ಗಂಗಾ ಜಲಪರ್ಯಟನೆ ಮಾಡುವಾಗ ಕಾಣಬರುವ ಘಾಟಿನ ದೃಶ್ಯಾವಳಿ ಯಾತ್ರಿಗಳಿಗೆ ರಸಮಾಲೆ, ಕಣ್ಣಿಗೆ ಹಬ್ಬವಾಗಿಸುವುದು

ತುಳಸಿಘಾಟ, ಹರಿಶ್ಚಂದ್ರಘಾಟ, ದಶಾಶ್ವಮೇದ ಘಾಟ, ಮಣಿಕರಣಿಕಾ ಘಾಟ, ಪಂಚಗಂಗಾ ಘಾಟ, ರಾಜಘಾಟ, ರಾಯಘಾಟ, ನೇಪಾಲಿ ಘಾಟ, ವರುಣಾಘಾಟ, ಕಪಾಳಘಾಟ, ಮತ್ತು ಹನುಮಾನ ಘಾಟ ಕೆಲ ಪ್ರಮುಖ ಸ್ನಾನಮಾಡುವ ಸ್ಥಳಗಳು ಆಗಿವೆ

ಮಣಿಕರಣಿಕ ಘಾಟಿನ ಮೇಲೆ ಜನಸಂದಣಿ ಹೆಚ್ಚಿರಲು ಯಾತ್ರಾರ್ಥಿಗಳಿಗೆ ಪ್ರದಾನ ಸೌಲಭ್ಯಗಳು ಇಲ್ಲಿ ಹೆಚ್ಚಿವೆ ಮಹೇಶ್ವರನು ತನ್ನ ಕರ್ಣಾಭರಣ ಇಲ್ಲಿ ಕಳೆದುಕೊಂಡಿರುವುದರಿಂದ ಈ ಘಾಟಿಗೆ ಅದೇ ಹೆಸರು ಬಂದಿದೆ ಅಸುನೀಗಿದವರ ಕಿವಿಯಲ್ಲಿ ಪರಶಿವನು ಈ ಘಾಟದ ಮೇಲಿಂದ ತಾರಕಮಂತ್ರ ಹೇಳುವನೆಂಬ ನಂಬಿಕೆ ಇರುವುದರಿಂದ ಇಲ್ಲಿ ಯಾತ್ರಿಗಳು ಬರುವ ಸಂಖ್ಯೆ ಹೆಚ್ಚು

ವಚನ ಪಾಲನೆಗಾಗಿ ಹೆಂಡತಿಯ ಶಿರಚ್ಚೇದನೆಗಾಗಿ ಶ್ರೀ ಹರಿಶ್ಚಂದ್ರ ಕತ್ತಿ ಎತ್ತಿದಾಗ ಪರಮಾತ್ಮನು ಬಂದು ತಡೆದದ್ದು ಹರಿಶ್ಚಂದ್ರ ಘಾಟಿನ ಮೇಲೆ ಪುಣ್ಯಸ್ನಾನವಾದ ನಂತರ ಯಾತ್ರಿಗಳು ಸತ್ಯಹರಿಶ್ಚಂದ್ರನನ್ನು ನೆನೆಯುವರು

ದಶಾಶ್ವಮೇದ ಘಾಟಿನಲ್ಲಿ ಕಾಶಿನಗರದ ಹೃದಯ ನೆಲೆಸಿದೆ ವ್ಯವಹಾರಿಕ ಚಟುವಟಿಕೆಯ ಚುರುಕಿನ ತಾಣ ಇದು ವಿಶ್ವನಾಥ ಮಂದಿರಕ್ಕೆ ಹತ್ತಿರ ಇರುವುದರಿಂದ ಇಲ್ಲಿಂದ ಗಂಗೆಯ ನೀರು ಒಯ್ದು ವಿಶ್ವನಾಥನಿಗೆ ಅಭಿಷೇಕ ಮಾಡುವರು ಸದಾ ಮಂತ್ರಘೋಷದಿಂದ ಮೊಳಗುವ ತಾಣವಾಗಿದೆ ಬ್ರಹ್ಮನು ಇದಕ್ಕೆ ದಶಾಶ್ವಮೇಧ ಘಾಟ ಎಂದು ಹೆಸರಿಸಿರುವನು ರಾಜಾದಿರಾಜರು ತಮ್ಮ ಸಾರ್ವಭೌಮತ್ವ ಮೆರೆಸಲು ಹತ್ತು ಅಶ್ವಮೇಧ ಯಾಗವನ್ನು ಮಾಡುತ್ತಿದ್ದರು ತುಳಸಿ ಘಾಟದ ಮೇಲೆ ಕವಿ ತುಳಸಿದಾಸರು ಧ್ಯಾನಮಗ್ನರಾಗಿ ಆಸೀನರಾಗುತ್ತಿದ್ದರಿಂದ ಅವನ ಹೆಸರಿಂದ ಸ್ಥಳನಾಮಕರಣಗೊಂಡಿದೆ ರಾಮಚರಿತ ಮಾನಸ ಬರೆಯಲು ಸ್ಪೂರ್ತಿ ಅವರಿಗೆ ಇಲ್ಲಿಂದ ಬಂದಿತು ಹರಿಶ್ಚಂದ್ರ, ಘಾಟದ ಹತ್ತಿರ ಹನುಮಾನ ಘಾಟ ಇದೆ ವಾಯು ಪುತ್ರ ಹನುಮನೆ ಇಲ್ಲಿ ತಪಸ್ಸನ್ನು ಮಾಡಿ ತನ್ನ ಮನೋಕಾಮನೆಗಳನ್ನು ಈಡೇರಿಸಿಕೊಂಡಿದ್ದು ಬ್ರಹ್ಮಹತ್ಯಾ ಪಾಪಕ್ಕೆ ಶಿವ ಬಲಿಯಾಗಿದ್ದ ಬ್ರಹ್ಮನ ತಲೆ ಕಡಿತ ಪಾಪ ನಿವಾರಣೆಗೆಂದು ಪರಶಿವ ಇಲ್ಲಿಗೆ ಬಂದು ಸ್ನಾನಮಾಡಿದ ಮೋಕ್ಷತಾಣ ಕಪಾಲಮೋಕ್ಷ ಘಾಟ ಆಗಿದೆ ಪಂಚಗಂಗಾ ಘಾಟಿನ ಹತ್ತಿರ ಗಂಗೆಯ ಐದು ಉಪನದಿಗಳು ಸಂಗಮಿಸಿವೆ

ಕಾಶಿ ವಿಶ್ವನಾದನ ಪೂಜಾ ಪುರಸ್ಕಾರಗಳು ತ್ರಿಕಾಲದಲ್ಲಿ ನಡೆಯುತ್ತಿರಬೇಕೆಂದು ಕಾಶಿರಾಜಾದಿರಾಜರು ದತ್ತಿಗಳನ್ನು ನೀಡುತ್ತಿದ್ದರು ಹಿಂದೆ ಕಾಶಿ ಅರಸರೆಲ್ಲರೂ ದರ್ಮಿಷ್ಟರೆಂಬ ಹೆಗ್ಗಳಿಕೆ ಪಡೆದವರಾಗಿದ್ದರು ಕಾಶಿಯ ಮಾಜಿ ಅರಸರಿಗೂ ದೇವಾಲಯದಲ್ಲಿ ನಡೆಯುವ ದೇವತಾರ್ಚನೆಯ ಕಾಲದಲ್ಲಿ ಉಪಸ್ಥಿತರಿರಲು ಮನ್ನಣೆ ನೀಡಲಾಗುತ್ತಿದೆ ಮರಾಠೀಶರುಗಳು ಅನ್ಯತ್ರಕಡೆಗಳಲ್ಲಿರುವ ಅರಸರುಗಳು ಯಾತ್ರಿಗಳ ಅನುಕೂಲಕ್ಕಾಗಿ ಕಾಶಿಯಲ್ಲಿ ದರ್ಮಶಾಲೆ ಹಾಗೂ ದೇವಾಲಯಗಳನ್ನು ಕಟ್ಟಿರುವರು ಕಾಶಿ ಕೋಮು ಸೌಹಾರ್ದತೆಯ ಪೀಠ

೧೭೮೫ ರಲ್ಲಿ ರಾಣಿ ಅಹಲ್ಯಾಬಾಯಿ ದೇವಾಲಯ ಜೀರ್ಣೋದ್ಧಾರ ಮಾಡಿದಳು ೧೮೩೯ ರಲ್ಲಿ ರಾಣಾರಣಜಿತಸಿಂಗ ಮಂದಿರ ಶಿಖರಕ್ಕೆ ಬಂಗಾರದ ತೊಡಿಸಿದನು ಅದರಿಂದ ಕಾಶಿ ವಿಶ್ವನಾಥನ ಮಂದಿರಕ್ಕೆ ಸುವರ್ಣಮಂದಿರ ಎನ್ನುತ್ತಾರೆ ಅನ್ನಪೂರ್ಣೇಶ್ವರಿ ಮಂದಿರದ ಹತ್ತಿರ ಮಹೇಶ್ವರ ಮಂದಿರ ಇದೆ ಅನ್ನಪೂರ್ಣೇಶ್ವರಿ ಪದ್ಮಾಸೀನಳು ಚೌಕಾಕಾರದ ಕಂಚು ತಳಿಗೆಯ ಹೊಂಡದಲ್ಲಿ ಶಿವಲಿಂಗ ರಾರಾಜಿಸುವುದು, ಯಾತ್ರಿಗಳು ಗಂಗಾಜಲಾಭಿಷೇಕ ಹಾಗೂ ಪೂಜಾ ಪ್ರಾರ್ಥನೆ ಸಲ್ಲಿಸುವಾಗ ಮೊಳಗಿಸುವ ಹರಹರ ಮಹಾದೇವ ಘೋಷಣೆಯಿಂದಾಗಿ ದೇಗುಲ ಸದಾ ಮಾರ್ದನಿಗೊಳ್ಳುತ್ತದೆ



# ವಾರ್ತಾಲಹರಿ

## ತಿರುಮಲೆಯಲ್ಲಿ ಆಂಧ್ರಪ್ರದೇಶದ ಮುಖ್ಯಮಂತ್ರಿ

ಆಂಧ್ರಪ್ರದೇಶದ ನೂತನ ಮುಖ್ಯಮಂತ್ರಿ ಶ್ರೀ ಕೋಟ್ಲ ವಿಜಯಭಾಸ್ಕರ ರೆಡ್ಡಿ ಅವರು ಅಕ್ಟೋಬರಿನಲ್ಲಿ ತಾವು ಪ್ರಮಾಣ ವಚನ ಸ್ವೀಕಾರ ಮಾಡಿದ ನಂತರ ಪ್ರಥಮಬಾರಿಗೆ ತಿರುಮಲೆಯ ಸ್ವಾಮಿ ದೇವಾಲಯಕ್ಕೆ ಆಗಮಿಸಿ ಅರ್ಚನೆ ಪೂಜೆ ಸಲ್ಲಿಸಿದರು

ಅಕ್ಟೋಬರ್ 18 ರಂದು ಭಾನುವಾರ ಸಂಜೆ ತಿರುಮಲೆಯ ಆಲಯಕ್ಕೆ ಅವರು ಆಗಮಿಸಿದಾಗ ಆಲಯಸಂಪ್ರದಾಯದಂತೆ ಇಸ್ತಿಕಪಾಲ ಸ್ವಾಗತ ನೀಡಲಾಯಿತು ಸೂರ್ಯಾಸ್ತದ ನಂತರ ಇಸ್ತಿಕಪಾಲ ಸ್ವಾಗತವಿರದು ಎಂಬ ಸಂಪ್ರದಾಯದಿಂದಾಗಿ ಸೂರ್ಯಾಸ್ತದ ಮುನ್ನವೇ ಮುಖ್ಯಮಂತ್ರಿ ಆಲಯಕ್ಕೆ ಆಗಮಿಸಿದರು ವೇದಘೋಷ ಮಂಗಳ ವಾದ್ಯಗಳ ನಡುವೆ ಇಸ್ತಿಕಪಾಲ ಸ್ವಾಗತ ನಡೆದನಂತರ ತಿ ತಿ ದೇ ಅಧ್ಯಕ್ಷರು ಶ್ರೀ ಟಿ ಸುಬ್ಬರಾಮಿ ರೆಡ್ಡಿ, ಬೋರ್ಡ್ ಸದಸ್ಯರು ಶ್ರೀ ದೊರೆಸ್ವಾಮಿರಾಜು, ಶ್ರೀ ಪಾಪಯಶೆಟ್ಟಿ, ಶ್ರೀ ಸತ್ಯನಾರಾಯಣ ಶ್ರೀಮತಿ ದಾಸರಿ ಪದ್ಮ--ಮೊದಲಾದವರೂ ತಿ ತಿ ದೇ ಕಾರ್ಯನಿರ್ವಹಣಾದಿಕಾರಿ ಶ್ರೀ ಎಂ ವಿ ಎಸ್ ಪ್ರಸಾದ್, ಜೆ ಇ ಓ ಶ್ರೀ ವೆಂಕಟರಾಮಯ್ಯ, ಡೆ ಇ ಓ ಶ್ರೀ ಪಟ್ಟಾಭಿರೆಡ್ಡಿ, ಮೊದಲಾದ ಅಧಿಕಾರಿಗಳು ಮುಖ್ಯಮಂತ್ರಿಗಳಿಗೆ ಸ್ವಾಗತ ನುಡಿದರು ಹತ್ತು ನಿಮಿಷ ದೇವರ ಸೇವೆಯಲ್ಲಿ ನಿರತರಾಗಿದ್ದ ಶ್ರೀ ಕೆ ವಿಜಯಭಾಸ್ಕರ ರೆಡ್ಡಿ ಅವರು ಹುಂಡಿಯಲ್ಲಿ ಕಾಣಿಕೆಗಳನ್ನು ಸಮರ್ಪಿಸಿದರು ಶ್ರೀ ರಂಗನಾಯಕ ಮಂಟಪದಲ್ಲಿ ವೇದಪಂಡಿತರ ವೇದಾಶೀರ್ವಾದವನ್ನು ನೀಡಿದ ನಂತರ ತಿ ತಿ ದೇ ಅಧ್ಯಕ್ಷರು ಮುಖ್ಯಮಂತ್ರಿಗಳಿಗೆ ಸ್ವಾಮಿ ಪ್ರಸಾದಗಳನ್ನು ನೀಡಿದರು ಕಾರ್ಯನಿರ್ವಹಣಾಧಿಕಾರಿಗಳು ತಿ ತಿ ದೇ ಪುಸ್ತಕಗಳನ್ನೂ, ಧ್ವನಿಸುರುಳಿಗಳನ್ನೂ ನೀಡಿದರು

ಸೋಮವಾರದಂದು ಮುಖ್ಯಮಂತ್ರಿಗಳು ತಿರುಚಾನೂರಿಗೆ ಹೋಗಿ ಶ್ರೀ ಪದ್ಮಾವತೀ ಅಮ್ಮನವರ ದರ್ಶನ ಸೇವೆಗಳಲ್ಲೂ ಪಾಲುಗೊಂಡರು

### ಬಾಲಮಂದಿರದ ಹೊಸಭವನ ಉದ್ಘಾಟನೆ

ತಿರುಪತಿಯಲ್ಲಿ ತಿ ತಿ ದೇ ನಿರ್ಮಿಸಿದ 43 2 ಲಕ್ಷರೂ ವೆಚ್ಚದ ಬಾಲಮಂದಿರ ಭವನವನ್ನು ಮುಖ್ಯಮಂತ್ರಿಗಳು ಸೋಮವಾರ ಉದ್ಘಾಟಿಸಿದರು ಸಭೆಯ ಅಧ್ಯಕ್ಷತೆ ವಹಿಸಿದ್ದ ತಿ ತಿ ದೇ ಅಧ್ಯಕ್ಷ ಶ್ರೀ ಟಿ ಸುಬ್ಬ ರಾಮರೆಡ್ಡಿ ಅವರು ಮಾತನಾಡುತ್ತ ಯಾತ್ರಿಕ ಸೌಕರ್ಯವೇ ತಿ ತಿ ದೇ ಗಳ ಮುಖ್ಯ ಆದರ್ಶವೆಂದು ವಿವರಿಸಿದರು ತಿ ತಿ ದೇ ಉದ್ಯೋಗಿಗಳ ಸಂಪದ ವತಿಯಿಂದ ಮುಖ್ಯಮಂತ್ರಿಗಳನ್ನು ಅಭಿನಂದಿಸಲಾಯಿತು ಈ ಕಾರ್ಯಕ್ರಮದಲ್ಲಿ ಕೇಂದ್ರ ಇಂದನಖಾತೆ ಮಂತ್ರಿ ಡಾ ಚಿಂತಾಮೋಹನ್, ಆಂಧ್ರಪ್ರದೇಶದ ಮಂತ್ರಿಗಳು ಶ್ರೀ ಮೈಸೂರಾರೆಡ್ಡಿ, ಶ್ರೀ ಕೆ ರಂಗರಾವ್, ಶ್ರೀ ಮೋಹನರಾವು, ಚಿತ್ತೂರುಜಿಲ್ಲೆಯ ಎಂ ಪಿ ಶ್ರೀ ಜ್ಞಾನೇಂದ್ರರೆಡ್ಡಿ, ತಿರುಪತಿ ಎಂ ಎಲ್ ಎ, ಶ್ರೀ ಮಬ್ಬುರಾಮಿರೆಡ್ಡಿ ತಿ ತಿ ದೇ ಕಾರ್ಯನಿರ್ವಹಣಾದಿಕಾರಿ ಶ್ರೀ ಎಂ ವಿ ಎಸ್ ಪ್ರಸಾದ್, ಚಿತ್ತೂರು ಜಿಲ್ಲಾಧಿಕಾರಿ ಶ್ರೀ ಟಿ ಜನಾರ್ದನನಾಯುಡು ಮೊದಲಾದವರು ಪಾಲುಗೊಂಡರು

### ಪುಸ್ತಕ ಬಿಡುಗಡೆ

ತಿ ತಿ ದೇ ಪೌರಸಂಬಂದಾದಿಕಾರಿ ಡಾ ರಾವುಲ ಸೂರ್ಯನಾರಾಯಣ ಮೂರ್ತಿ ಅವರು ಬರೆದ ರಾವುಲ ರಾಮಾಯಣ ಕೃತಿಯನ್ನು (ತೆಲುಗು) ಈ ಸಬೆಯಲ್ಲಿ ಮುಖ್ಯಮಂತ್ರಿಗಳು ಬಿಡುಗಡೆ ಮಾಡಿದರು ವಾಲ್ಮೀಕಿಯ ಆದಾರದಲ್ಲಿ ಬರೆದ ಈ ತೆಲುಗು ಕೃತಿಯನ್ನು ತಿ ತಿ ದೇ ಪ್ರಕಟಿಸಿರುವುದು ತುಂಬ ಸೂಕ್ತವೆಂದು ಗ್ರಂಥಕರ್ತೃ ಶ್ಲಾಘ್ಯವಾದ ರೀತಿಯಲ್ಲಿ ಸರಳ ಸುಂದರವಾಗಿ ಬರೆದಿದ್ದಾರೆ ಎಂದು ಮುಖ್ಯಮಂತ್ರಿಗಳು ಅಭಿನಂದಿಸಿದರು

ತಿರುಮಲೆಯಲ್ಲಿ ಉದ್ಯಾನವನ ವಿಭಾಗದಲ್ಲಿ ಬೆಳೆಸುತ್ತಿರುವ ವಿವಿದ ತರು ಗಿಡ ಬಳ್ಳಿಗಳ ವಿವರಗಳನ್ನು ನೀಡುವ ದೇವತಾವೃಕ್ಷಾಲು ಪುಸ್ತಕವನ್ನೂ ಮುಖ್ಯಮಂತ್ರಿಗಳು ಬಿಡುಗಡೆಮಾಡಿದರು

### ನೂತನ ಕಲ್ಯಾಣ ಮಂಟಪಕ್ಕೆ ಶಂಕುಸ್ಥಾಪನೆ

ತಿರುಮಲೆಯಲ್ಲಿ 12 ಕೋಟಿರೂಪಾಯಿಗಳ ವೆಚ್ಚದಲ್ಲಿ ನಿರ್ಮಿಸಲು ತೀರ್ಮಾನಿಸಲಾಗಿರುವ ಸ್ವಾಮಿ ಕಲ್ಯಾಣ ಮಂಟಪಕ್ಕೆ ಶಂಕುಸ್ಥಾಪನೆ ನಡೆಸಿಕೊಟ್ಟರು ತಿರುಮಲೆಯ ದೇವಾಲಯದಲ್ಲಿ ಆರ್ಜಿತ ಕಲ್ಯಾಣೋತ್ಸವದಲ್ಲಿ ಈಗ ದಿನವೊಂದಕ್ಕೆ ಸಾವಿರದಿಂದ ಸಾವಿರದಿನ್ನೂರು ಮಂದಿ ಮಾತ್ರ ಬಾಗವಹಿಸಲು ಅನುಕೂಲವಾಗುವ ಸ್ಥಳಾವಕಾಶವಿದೆ ಕಲ್ಯಾಣೋತ್ಸವದಲ್ಲಿ ಬಾಗವಹಿಸುವ ಭಕ್ತರು ದಿನೇದಿನೇ ಹೆಚ್ಚುತ್ತಿದ್ದು ಸ್ಥಳಾವಕಾಶ ಸೂಕ್ತವಾಗಿ ವಿಸ್ತರಿಸಬೇಕಾದ ಅಗತ್ಯವನ್ನು ಈ ಹೊಸಕಲ್ಯಾಣಮಂಟಪ ತುಂಬಿಕೊಡುತ್ತದೆ ಸದರಿ ಕಾರ್ಯಕ್ರಮದಲ್ಲಿ ತಿ ತಿ ದೇ ಅದ್ಯಕ್ಷರು ಶ್ರೀ ಟಿ ಸುಬ್ಬರಾಮಿರೆಡ್ಡಿ, ಚಿತ್ತೂರು ಜಿಲ್ಲಾದಿಕಾರಿ ಶ್ರೀ ಟಿ ಜನಾರ್ದನ ನಾಯುಡು, ತಿ ತಿ ದೇ ಕಾರ್ಯನಿರ್ವಹಣಾದಿಕಾರಿ ಶ್ರೀ ಎಂ ವಿ ಎಸ್ ಪ್ರಸಾದ್ ಮೊದಲಾದವರು ಭಾಗವಹಿಸಿದ್ದರು

### ತಿರುಮಲೆಯಲ್ಲಿ ನೆರಳು ನಿರ್ಮಾಣ ನಿರ್ಣಯ

ದಿನೇ ದಿನೇ ತಿರುಮಲೆಯ ಸ್ವಾಮಿಯನ್ನು ನೋಡಲು ಬರುವ ಯಾತ್ರಿಕರು ಹೆಚ್ಚುತ್ತಿದ್ದು ಅವರು ಕುಳಿತು ಕಾಯುವ ಕ್ಯೂಷೆಡ್‌ಗಳ ಸ್ಥಳಾವಕಾಶ ಸಾಲದೆ ಎಲ್ಲ ಕಡೆಯೂ ತುಂಬಿ ಹೊರಗಡೆ ಸರತಿಯಸಾಲುಗಳು ನಿರ್ಮಾಣವಾಗುತ್ತಿರುವುದು ಸರ್ವೇಸಾಮಾನ್ಯವಾಗುತ್ತಿದ್ದು ಹೊರಗೆ ಸರದಿಯ ಸಾಲಿನಲ್ಲಿ ನಿಲ್ಲುವ ಯಾತ್ರಿಕರು ಮಳೆಬಿಸಿಲುಗಳಲ್ಲಿ ಸಿಕ್ಕು ಬಳಲುವುದನ್ನು ತಪ್ಪಿಸಲು ನೆರಳುಗಳನ್ನು ನಿರ್ಮಾಣ ಮಾಡಬೇಕೆಂದು ತಿ ತಿ ದೇ ನಿರ್ಣಯಿಸಿದೆ

ಬರುವ ಜನವರಿಯ ಒಳಗೆ ಈ ಸರದಿಯ ಸಾಲಿನ ನೆರಳು ನಿರ್ಮಾಣ ಪೂರ್ಣಗೊಳಿಸಬೇಕೆಂದು ನಿರ್ಣಯವಾಗಿದೆಯೆಂದು ತಿ ತಿ ದೇ ಅಧ್ಯಕ್ಷ ಶ್ರೀ ಟಿ ಸುಬ್ಬರಾಮಿರೆಡ್ಡಿಯವರು ಪತ್ರಿಕಾ ಸಮಾವೇಶದಲ್ಲಿ ತಿಳಿಸಿದರು

ತಿರುಮಲೆಯಲ್ಲಿ ಯಾತ್ರಿಕರಿಗೆ ಸಲಹೆ ಸೂಚನೆಗಳನ್ನು ನೀಡುವ ವಿಚಾರಣಾ ಕೇಂದ್ರಗಳಲ್ಲಿ ಹಿಂದಿ ಬಲ್ಲವರನ್ನು ನಿಯಮಿಸಲಾಗುವುದೆಂದೂ ಅವರು ತಿಳಿಸಿದರು



# ಗೋಪಾಲಕೃಷ್ಣ ಅಡಿಗರ ನಿಧನ

ಕನ್ನಡದ ಖ್ಯಾತ ಕವಿ ಎಂ ಗೋಪಾಲಕೃಷ್ಣ ಅಡಿಗರು ನವಂಬರ್ 5 ರಂದು ಬೆಂಗಳೂರಿನಲ್ಲಿ ಹೃದಯಾಘಾತದಿಂದ ಮೃತರಾದರೆಂದು ತಿಳಿಸಲು ವಿಷಾದವಾಗುತ್ತದೆ

1918 ರ ಫೆಬ್ರುವರಿ 18 ರಂದು ದಕ್ಷಿಣ ಕನ್ನಡ ಜಿಲ್ಲೆಯ ಮೋಗೇರಿಯಲ್ಲಿ ಜನಿಸಿದ 74 ವರ್ಷ ವಯಸ್ಸಿನ ಗೋಪಾಲಕೃಷ್ಣ ಅಡಿಗರು 1936 ರಿಂದ ಕನ್ನಡದಲ್ಲಿ ಬರೆಯುತ್ತಿದ್ದರೂ ಛಂದಸ್ಸನ್ನು ಬಿಟ್ಟು ನವ್ಯಮಾರ್ಗದಲ್ಲಿ ನಡೆದದ್ದು 'ನಡೆದುಬಂದದಾರಿಯ' ನಂತರವೇ ಭಾವತರಂಗ, ಕಟ್ಟುವೆವುನಾವು, ನಡೆದುಬಂದ ದಾರಿ, ಚಂಡ ಮದ್ದಳೆ, ಭೂಮಿಗೀತ, ವರ್ಧಮಾನ, ಇದನ್ನು ಬಯಸಿರಲಿಲ್ಲ, ಮೂಲಕ ಮಹಾಶಯರು ಬತ್ತಲಾರದ ಗಂಗೆ, ಚಿಂತಾಮಣಿಯಲ್ಲಿ ಕಂಡ ಮುಖ, ಸುವರ್ಣಪುತ್ಥಳಿ -- ಕವನ ಸಂಕಲನಗಳನ್ನೂ, ಹಲವಾರು ಸಾಮಾಜಿಕ ಅವಸರದ ಲೇಖನಗಳನ್ನೂ ಕಾದಂಬರಿಗಳನ್ನೂ ಬರವ ಶ್ರೀಯುತರು ಕೇಂದ್ರ ಸಾಹಿತ್ಯ ಅಕಾಡಮಿ ಹಾಗೂ ಕಬೀರ ಸಮ್ಮಾನ, ಕುಮಾರನ್ ಆಶಾನ್ ಪ್ರಶಸ್ತಿಗಳನ್ನು ಪಡೆದಿದ್ದರು ಧರ್ಮಸ್ಥಳದಲ್ಲಿ ನಡೆದ ಸಾಹಿತ್ಯಸಮ್ಮೇಳನದ ಅಧ್ಯಕ್ಷತೆಯನ್ನು ವಹಿಸಿದ್ದರು

ಅಡಿಗರು ಬರೆದದ್ದು ಸ್ವಲ್ಪವೇ ಆದರೂ ಅದು ಮಹತ್ವದ್ದು ಸತ್ವದ್ದೂ ಆಗಿದ್ದಿತು ಮೋಹನ ಮುರಲಿ, ಕೃಷ್ಣನ ಕೊಳಲು, ಭೂಮಿಗೀತ, ರಾಮನವಮಿಯದಿವಸ, ಆನಂದತೀರ್ಥರಿಗೆ, ಬತ್ತಲಾರದ ಗಂಗೆ -- ಅವರ ಕಾವ್ಯರಾಶಿಯಲ್ಲಿ ಎದ್ದು ನಿಲ್ಲುವಂತಹ ಕೆಲವು.

ಆಂಗ್ಲ ಅಧ್ಯಾಪಕರಾಗಿ, ಸಾಗರದ ಲಾಲ್ ಬಹದೂರ್ ಕಾಲೇಜಿನಲ್ಲಿ, ಉಡುಪಿಯ ಪೂರ್ಣಪ್ರಜ್ಞ ಕಾಲೇಜಿನಲ್ಲಿ ಪ್ರಾಂಶುಪಾಲರಾಗಿ, ಸಿಮ್ಲಾದ ಉನ್ನತ ಅಧ್ಯಯನ ಸಂಸ್ಥೆಯ ನಿರ್ದೇಶಕರಾಗಿ ಸಾಕ್ಷಿ ತ್ರೈಮಾಸಿಕ ಪತ್ರಿಕೆಯ ಸಂಪಾದಕರಾಗಿ ದುಡಿದ ಅಡಿಗರು ಪತ್ನಿ ಇಬ್ಬರು ಪುತ್ರರು ಮೂವರು ಪುತ್ರಿಯರು ಹಾಗೂ ಅಪಾರ ಅಭಿಮಾನಿಗಳನ್ನು ಬಿಟ್ಟು ಹೋಗಿದ್ದಾರೆ ಅವರ ನೆನಪಿನಲ್ಲಿ ಸಪ್ತಗಿರಿ ಕೈಮುಗಿಯುತ್ತದೆ

--ಸಂ||

ಸಪ್ತಸಾಗರದಾಚೆಯಲ್ಲೋ ಸುಪ್ತಸಾಗರ ಕಾದಿದೆ
ಮೊಳೆಯದಲೆಗಳ ಮೂಕ ಮರ್ಮರ ಇಂದು ಇಲ್ಲಿಗು ಹಾಯಿತೆ?

ವಿವಶವಾಯಿತು ಪ್ರಾಣ ಹಾ! ಪರವಶವು ನಿನ್ನೀ ಚೇತನ
ಇರುವುದೆಲ್ಲವ ಬಿಟ್ಟು ಇರದುದರೆಡೆಗೆ ತುಡಿವುದೆ ಜೀವನ?

ಯಾವ ಮೋಹನ ಮುರಲಿ ಕರೆಯಿತು ಇದ್ದಕಿದ್ದೊಲೆ ನಿನ್ನನು?
ಯಾವ ಬೃಂದಾವನವು ಚಾಚಿತು ತನ್ನ ಮಿಂಚಿನ ಕೈಯನು?

**---ಮೋಹನ ಮುರಲಿಯಿಂದ.**

## ಸುಜ್ಞಾನೇಂದ್ರರ ಆರಾಧನೆ

ಗುರುಗಳಾದ ಶ್ರೀ ಸುಜ್ಞಾನೇಂದ್ರರ ಸ್ಮರಣೆ ನಮ್ಮ ಜ್ಞಾನ ಸ್ಫೂರ್ತಿ ಹಾಗೂ ಲೋಕ ಸೇವೆಗೆ ಸಪ್ರೇರಣೆಯನ್ನು ನೀಡಲಿ ಎಂದು ಪರ್ಯಾಯ ಶ್ರೀಗಳಾದ ಶ್ರೀ ಸುಗುಣೇಂದ್ರ ತೀರ್ಥರು ನುಡಿದರು ಅವರು ಪುತ್ತಿಗೆ ಮಠದ ಗುರುಗಳಾದ ಶ್ರೀ ಸುಜ್ಞಾನೇಂದ್ರತೀರ್ಥರ ಆರಾದನಾ ಮಹೋತ್ಸವದಂದು ಗುರು ಸಂಸ್ಮರಣಾ ಕಾರ್ಯಕ್ರಮದಲ್ಲಿ ಮಾತನಾಡುತ್ತಾ ಶ್ರೀ ಸುಜ್ಞಾನೇಂದ್ರತೀರ್ಥರ ಆಯುರ್ವೇದ ಕೌಶಲ್ಯ ಹಾಗೂ ಜ್ಞಾನ ಕಾರ್ಯಗಳ ಬಗ್ಗೆ ಸ್ಮರಿಸಿದರು ಕೃಷ್ಣಾಪುರ ಮಠದ ಶ್ರೀ ವಿದ್ಯಾಸಾಗರ ತೀರ್ಥರು ಈ ಸಂದರ್ಭದಲ್ಲಿ ತಮ್ಮ ಆಶ್ರಮ ಗುರುಗಳಾದ ಶ್ರೀ ಸುಜ್ಞಾನೇಂದ್ರರ ಬಗ್ಗೆ ಮಾತನಾಡಿ, ಪರ್ಯಾಯ ಶ್ರೀಪಾದರ ಲಕ್ಷ ಗೀತಾ ಲೇಖನ ಯಜ್ಞದ ಅಂಗವಾಗಿ ಕಾಲೇಜು ವಿದ್ಯಾರ್ಥಿಗಳಿಗೆ ಭಗವಂತನ ನಲ್ನುಡಿ ಕನ್ನಡ ಭಗವದ್ಗೀತೆಯ ಪುಸ್ತಕಗಳನ್ನು ವಿತರಿಸಿದರು ಪಲಿಮಾರು ಮಠದ ಕಿರಿಯ ಶ್ರೀಪಾದರಾದ ಶ್ರೀ ವಿದ್ಯಾದೀಶ ತೀರ್ಥರೂ ಈ ಸಂದರ್ಭದಲ್ಲಿ ಪರ್ಯಾಯ ಮಠದ ವತಿಯಿಂದ ನಡೆಯುವ ಪೌರೋಹಿತ್ಯ ಶಿಕ್ಷಣ ಕೇಂದ್ರ ಹಾಗೂ ವೇದ ತರಗತಿಗಳ ಬಗ್ಗೆ ಮೆಚ್ಚುಗೆ ವ್ಯಕ್ತಪಡಿಸಿ ಶ್ರೀ ಸುಜ್ಞಾನೇಂದ್ರತೀರ್ಥರ ಬಗ್ಗೆ ಮಾತನಾಡಿದರು

ತಾ 27--7--92 ರಂದು ಶ್ರೀಕೃಷ್ಣ ಮಠದಲ್ಲಿ ನಡೆದ ಗುರುವಂದನೆ, ಪೌರೋಹಿತ್ಯ ಶಿಕ್ಷಣ ಕೇಂದ್ರದ ವರ್ಧಂತಿ ಹಾಗೂ ಲಕ್ಷ ಗೀತಾ ಲೇಖನ ದೀಕ್ಷೆ -- ಈ ಸಂಯೋಜಿತ ಕಾರ್ಯಕ್ರಮಗಳ ಬಗ್ಗೆ ಪ್ರಸ್ತಾವನೆಯನ್ನು ಶ್ರೀ ರಾಜಗೋಪಾಲಾಚಾರ್ಯರು ಮಾಡಿದರು ಶ್ರೀ ಕಟ್ಟೆ ವಾದಿರಾಜ ಆಚಾರ್ಯ, ಶ್ರೀ ಹರಿದಾಸ ಉಪಾಧ್ಯ ಹಾಗೂ ಶ್ರೀ ಸಗ್ರಿ ರಾಘವೇಂದ್ರ ಉಪಾಧ್ಯಾಯರು ಈ ಸಂದರ್ಭದಲ್ಲಿ ಮಾತನಾಡಿದರು ಬೆಂಗಳೂರಿನ ಉದ್ಯಮಿ, ಭಕ್ತ ಶ್ರೀ ಎಸ್ ಎಸ್ ಮಡಿಯವರ ವತಿಯಿಂದ ಪೌರೋಹಿತ್ಯ ಶಿಕ್ಷಣ ಕೇಂದ್ರದ ಹಾಗೂ ವೇದ ವಿದ್ಯಾರ್ಥಿಗಳಿಗೆ ಪಟ್ಟೆಮಡಿಯನ್ನು ಪರ್ಯಾಯ ಶ್ರೀಪಾದರು ವಿತರಿಸಿದರು ವೇದ ಹಾಗೂ ಪೌರೋಹಿತ್ಯ ತರಗತಿಗಳ ಪೋಷಕರಾದ ಶ್ರೀ ಯಾದವಾಚಾರ್ಯ ಹಾಗೂ ಶ್ರೀ ಜಿ ಅನಂತ ಕೃಷ್ಣಾಚಾರ್ಯರನ್ನು ಶ್ರೀಪಾದರು ಶಾಲು ಹೊದಿಸಿ ಗೌರವಿಸಿದರು ಸಂಜೆ ಶ್ರೀ ಸುಜ್ಞಾನೇಂದ್ರತೀರ್ಥರ ಭಾವಚಿತ್ರದ ಮೆರವಣಿಗೆಯು ನಡೆಯಿತು



# ತಿರುಮಲೆ ತಿರುಪತಿ ದೇವಸ್ಥಾನಗಳು,

ತಿರುಪತಿ

## ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನ ಯೋಜನೆ

ಎಂ ವಿ ಎಸ್ ಪ್ರಸಾದ್, ಐ ಎ ಎಸ್,
ಕಾರ್ಯನಿರ್ವಹಣಾಧಿಕಾರಿ

ಪ್ರಿಯ ಭಕ್ತ ಬಂಧುಗಳೆ,

ಅನ್ನದಾನಕ್ಕಿಂತ ಇನ್ನು ಚೆನ್ನಾದ ಉನ್ನತವಾದ ದಾನ ಮತ್ತೊಂದಿಲ್ಲ ಹಸಿದು ಬಂದವರಿಗಶನವೀಯುವುದು ನಮ್ಮ ದೇಶದಲ್ಲಿ ಒಂದು ಸೇವೆ ಮಾತ್ರವೇ ಅಲ್ಲ, ವೇದಕಾಲದಿಂದ ಆಚರಣೆಯಲ್ಲಿರುವ ಪರಂಪರಾಗತ ಧರ್ಮವೂ ಆಗಿದೆ ಆಹಾರವನ್ನು ನೀಡಿವವರು ದೇವತೆಗಳೊಡನೆ ಸ್ಥಾನ ಪಡೆಯುವರೆಂದು ಹೇಳಲಾಗಿದೆ

ತಿರುಮಲೆ ಯಾತ್ರಿಕರಿಗೆ ಉಚಿತವಾಗಿ ಹಾಗೂ ಪೂರ್ಣವಾಗಿ ಭೋಜನ ನೀಡುವ ಉದ್ದೇಶದಿಂದ ೧೯೮೫ ರಲ್ಲಿ ತಿರುಮಲೆ ತಿರುಪತಿ ದೇವಸ್ಥಾನಗಳಿಂದ ಆರಂಭಿಸಲ್ಪಟ್ಟ ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನಯೋಜನೆಯು ಶೋಭಾಕರವಾದ ಯಶಸ್ಸು ಪಡೆದಿದೆ ಭಾರತಾದ್ಯಂತದ ದಾನಿಗಳಿಂದ ಈ ಯೋಜನೆಯ ಬಗ್ಗೆ ಅತ್ಯುತ್ಸಾಹ ಕಂಡು ಬರುತ್ತಿದೆ

ಭೋಜನದ ಗುಣಮಟ್ಟವೂ, ಉತ್ಕೃಷ್ಟತೆಯೂ, ಸಾರ್ವಜನಿಕರ ಶ್ಲಾಘನೆಗೆ ಪಾತ್ರವಾಗಿದೆ ಈ ವಿಶಿಷ್ಟವಾದ ಅನ್ನದಾನಯೋಜನೆಯ ಸಂತಸಕರ ಫಲವನ್ನು ತಿರುಮಲೆಯ ಬಹುತೇಕ ಯಾತ್ರಿಕರು ಹೊಂದುತ್ತಿದ್ದಾರೆ

ನಿತ್ಯ ಅನ್ನದಾನಯೋಜನೆಯಲ್ಲಿ, ಶ್ರೀ ಸಾಮಾನ್ಯ ಭಕ್ತರೂ ತಮ್ಮ ಯಥಾಶಕ್ತಿ ವಂತಿಗೆಯನ್ನು ಸಲ್ಲಿಸುವುದರ ಮೂಲಕ, ಪಾಲುಗೊಳ್ಳುವಂತೆ ಮಾಡಬೇಕೆಂದು ಯೋಚಿಸಿ, ಈ ವಂತಿಗೆಯ ಮೊತ್ತವನ್ನು ಸಾಕಷ್ಟು ಕಡಿಮೆ ಮಾಡಲು ತಿ ತಿ ದೇವಸ್ಥಾನಗಳು ಈಚೆಗೆ ನಿರ್ಧರಿಸಿದೆ ತಾವು ರೂ ೧೦೦೦೦:- ಅಥವಾ ಗುಣಕಗಳಲ್ಲಿ ದಾನ ಮಾಡಿದರೂ ನಾಕು, ಉನ್ನತ ಹಾಗೂ ಅರ್ಹವಾದ ಕಾರ್ಯದಲ್ಲಿ ನೆರವು ನೀಡಿದಂತಾಗಿ ಆ ಮೂಲಕ ಕಾಲಾತೀತ ಪರಂಪರೆಯಾದ ಅನ್ನದಾನಯೋಜನೆಯನ್ನು ತಿ ತಿ ದೇ ಉಳಿಸಿಕೊಂಡು ಮುಂದುವರೆಯುವಂತೆ ಮಾಡಿದವರಾಗುತ್ತೀರಿ

ದೂರದೂರಗಳಿಂದ ತಿರುಮಲೆಗೆ ಆಗಮಿಸುವ ಯಾತ್ರಿಕರ ಬಗ್ಗೆ ತಮ್ಮ ಹೃದಯ ಸಹಾನುಭೂತಿಯಿಂದ ಆರ್ದ್ರವಾಗುವಲ್ಲಿ, ಪರಿಷ್ಕೃತವಾದ ನಿತ್ಯ ಅನ್ನದಾನಯೋಜನೆಯಲ್ಲಿ ಸೇರಿ, ಈ ಪವಿತ್ರ ಸೇವೆಯಲ್ಲಿ ಭಾಗಿಗಳಾಗಿರಿ

ಅನ್ನೇಶ್ರಿತಾನಿ ಭೂತಾನಿ ಅನ್ನಂ ಪ್ರಾಣಮಿತಿ ಶ್ರುತಿಃ
ತಸ್ಮಾದನ್ನಂ ಪ್ರದಾತವ್ಯಂ ಅನ್ನಂ ಹಿ ಪರಮಂ ಹವಿಃ

ಒಳಶಕ್ತಿಯ ಜೀವಸತ್ವ ಆಹಾರ ಎಂದು ವೇದಗಳು ಘೋಷಿಸುತ್ತಿವೆ ಅನ್ನದಾನ, ಭೌತಿಕ ಗುಣಗಳನ್ನು ಮೀರಿ ನಿಲ್ಲುವ ಅಮೂಲ್ಯ ಕ್ರಮವಾಗಿದೆ ಹಾಗಾಗಿ ಅನ್ನದಾನ ಮಾಡಬೇಕು

-ಬೋಧಾಯನ ಧರ್ಮಸೂತ್ರ

ವಂದನೆಗಳೊಡನೆ ತಮ್ಮ ವಿಶ್ವಾಸಿ,

(ಎಂ ವಿ ಎಸ್ ಪ್ರಸಾದ್)



ತಿರುಮಲೆ -- ತಿರುಪತಿ ದೇವಸ್ಥಾನಗಳು

# ಅಭಿಷೇಕ ಸೇವೆಗಳು

ತಿರುಮಲೆ ತಿರುಪತಿ ದೇವಸ್ಥಾನಗಳ ಆಡಳಿತ ಪರಿಧಿಯ ಆರು ದೇವಾಲಯಗಳಲ್ಲಿ ವಾರಕ್ಕೆ ಒಮ್ಮೆ ನಡೆಯುವ ಅಬಿಷೇಕ ಸಮಯದಲ್ಲಿ ಭಕ್ತರು ಒಬ್ಬರಿಗೆ ೫ ರೂಪಾಯಿನಂತ ಶುಲ್ಕ ನೀಡಿ ಅಭಿಷೇಕ ದರ್ಶನ ಪೊಂದಬಹುದು ವಿವಿದೆಡೆಗಳಲ್ಲಿರುವ ಈ ದೇವಾಲಯಗಳೆಂದರೆ---

1 ಶ್ರೀ ವೇದನಾರಾಯಣಸ್ವಾಮಿ ಆಲಯ
--ನಾಗುಲಾಪುರಂ

2 ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ಆಲಯ
--ನಾರಾಯಣವನಂ

3 ಶ್ರೀ ವೇಣುಗೋಪಾಲಸ್ವಾಮಿ ಆಲಯ
--ಕಾರ್ವೇಟಿನಗರ

4 ಶ್ರೀ ಪ್ರಸನ್ನ ವೆಂಕಟೇಶ್ವರಸ್ವಾಮಿ ಆಲಯ
--ಅಪ್ಪಲಾಯಗುಂಟ

5 ಶ್ರೀ ವೆಂಕಟೇಶ್ವರಸ್ವಾಮಿ ಆಲಯ
--ಶ್ರೀನಿವಾಸಮಂಗಾಪುರ

6 ಆಲಯಸಮುದಾಯ --ಹೃಷೀಕೇಶ

ಭಕ್ತ ಯಾತ್ರಿಕರು ಈ ವಿಶೇಷ ಸೇವೆಯನ್ನು ದರ್ಶಿಸಬೇಕೆಂದು ವಿನಂತಿಸಲಾಗಿವೆ

**ತಿ. ತಿ. ದೇವಸ್ಥಾನಗಳು,**
ತಿರುಪತಿ



# ಮುಂದಿನ ಸಂಚಿಕೆಯಲ್ಲಿ

ಸಪ್ತಗಿರಿ --- ಜನವರಿ 1993

**ತಿರುಪ್ಪಾವೈ**
--ಕಂದಾಡೈ ಕೇಶವನ್

**ನಾಮಸಂಕೀರ್ತನೆ**
--ಬ ನ ಗುಂಡೂರಾವ್

**ಅಶ್ವತ್ಥ ವೃಕ್ಷ**
--ರಘುಸುತ

**ಗೋವಾ**
--ಸುಮಿತ್ರಾ ಶಾನಭಾಗ

**ತಿರುಮಲೆಯಸ್ವಾಮಿ**
--ಜೆ ಬಾಲಸುಬ್ರಹ್ಮಣ್ಯಂ

**ಜೊತೆಗೆ ಆಕರ್ಷಕವಾದ ಮತ್ತೂ ಹಲವಾರು ಸಾಮಯಿಕ ಲೇಖನಗಳು**
**ತಮ್ಮ ಪ್ರತಿಯನ್ನು ಇಂದೇ ಕಾದಿರಿಸಿ.**

ಸೂಚನೆ ಸಪ್ತಗಿರಿ ವಾರ್ಷಿಕ ಚಂದಾ ಹನ್ನೆರಡು ರೂಪಾಯಿ ಮಾತ್ರ ತಮ್ಮ ಚಂದಾ ಹಣವನ್ನು ಎಂ ಓ ಡಿ ಡಿ ಯ ಮೂಲಕ ಸಂಪಾದಕರು, ಸಪ್ತಗಿರಿ, ತಿ ತಿ ದೇ ತಿರುಪತಿ -- ಇವರಿಗೆ ಕಳುಹಿಸಿ ವಿಳಾಸವನ್ನು ಸ್ಪಷ್ಟವಾಗಿ ಬರೆಯಿರಿ ಎಂದು ವಿನಂತಿ

# ತಿಂಗಳಿನ ಮುಖ್ಯದಿನಗಳು

ಜನವರಿ --- 1993

| | | |
|---|---|---|
| 1 | ಶುಕ್ರವಾರ | ಆಂಗ್ಲ ಸಂವತ್ಸರಾದಿ |
| 5 | ಮಂಗಳವಾರ | ಸ್ವಾಮಿ ಪುಷ್ಕರಿಣೀ ತೀರ್ಥ ಮುಕ್ಕೋಟಿ<br>ಶ್ರೀ ಕಪಿಲೇಶ್ವರಸ್ವಾಮಿ ತೆಪ್ಪೋತ್ಸವಾರಂಭ |
| 6 | ಬುಧವಾರ | ಆಂಡಾಳ್ ನೀರಾಟ್ಟೋತ್ಸವಾರಂಭ |
| 7 | ಗುರುವಾರ | ಶ್ರೀ ಕಪಿಲೇಶ್ವರಸ್ವಾಮಿ ತೆಪ್ಪೋತ್ಸವ ಸಮಾಪ್ತಿ |
| 8 | ಶುಕ್ರವಾರ | ಶ್ರೀ ಕಪಿಲೇಶ್ವರಸ್ವಾಮಿ ಆರ್ದ್ರಾದರ್ಶನೋತ್ಸವ |
| 12 | ಮಂಗಳವಾರ | ಆಂಡಾಳ್ ನಿರಾಟ್ಟೋತ್ಸವ ಸಮಾಪ್ತಿ |
| 13 | ಬುಧವಾರ | ಭೋಗಿ ಹಬ್ಬ |
| 14 | ಗುರುವಾರ | ಮಕರಸಂಕ್ರಮಣ |
| 15 | ಶುಕ್ರವಾರ | ಕನೂಹಬ್ಬ, ಗೋದಾಪರಿಣಯೋತ್ಸವ<br>ತಿರುಮಲೆಯಲ್ಲಿ ಪಾರ್ವೇಟಿ ಉತ್ಸವ |
| 26. | ಮಂಗಳವಾರ | ಭಾರತ ಗಣತಂತ್ರದಿನ |
| 30. | ಶನಿವಾರ | ರಥ ಸಪ್ತಮಿ |

# ಗಮನಿಕೆ

ವಿವಿಧ ಭಾಷೆಗಳಲ್ಲಿ ಸಪ್ತಗಿರಿಯ ಪ್ರಚಾರ, ಆಸ್ತಿಕರ ಅಭಿಮಾನಗಳು ದಿನ ದಿನ ಪ್ರವರ್ಧಮಾನವಾಗುತ್ತಿರುವುದರಿಂದ ಕೆಲವರು ಚಂದಾದಾರರಿಗೆ ಸಪ್ತಗಿರಿ ಪ್ರತಿಗಳು ಲಭಿಸದೆ ಹೋಗುತ್ತಿವೆ ಆದ್ದರಿಂದ ಸಪ್ತಗಿರಿಯನ್ನು ಕೋರುವವರು ಕೆಳಗಿನ ಸೂಚನೆಗಳನ್ನು ಗಮನಿಸಲು ಕೋರುತ್ತೇವೆ

* ಸಪ್ತಗಿರಿಯನ್ನು ಕೋರುವವರು ಪ್ರತಿತಿಂಗಳಿನಲ್ಲಿ ೧೫ನೇ ತಾರೀಖಿನ ಒಳಗೆ ಚಂದಾ ಹಣವನ್ನು ಕಳುಹಿಸಬೇಕು ನಂತರ ಕಳುಹಿಸಿದವರಿಗೆ ಮಾರನೆಯ ತಿಂಗಳಿನಿಂದ ಮಾತ್ರವೇ ಪತ್ರಿಕೆ ಲಭ್ಯವಾಗುತ್ತದೆ

* ಹೊಸ ಚಂದಾದಾರರು ಮನಿ ಆರ್ಡರ್ ಕೂಪನಿನಲ್ಲಿ 'ಹೊಸ ಚಂದಾ' ಎಂದು ಬರೆಯಬೇಕು ಮಿಕ್ಕ ಚಂದಾದಾರರು ಕೂಪನಿನಲ್ಲಿ ತಮ್ಮ ಚಂದಾಸಂಖ್ಯೆಯನ್ನು ನಮೂದಿಸಬೇಕು ಹಿಂದಿನ ಸಂಚಿಕೆಯ ತಮ್ಮ ವಿಳಾಸದ ಕಾಗದವನ್ನು ಕಳುಹಿಸಿದರೂ ಬಹಳ ಸೌಕರ್ಯವಾಗುತ್ತದೆ

* ಸಪ್ತಗಿರಿ ಪ್ರತಿಗಳಿಗೆ ಸಂಬಂಧಿಸಿದ ಹಣವನ್ನಾಗಲಿ, ಇತರ ವಿವರಗಳಿಗಾಗಲಿ ಕೆಳಗಿನ ವಿಳಾಸಕ್ಕೆ ಮಾತ್ರವೇ ಬರೆಯಬೇಕು

**ಸಂಪಾದಕರು**
ಸಪ್ತಗಿರಿ
ಟಿ ಟಿ ಡಿ
ತಿರುಪತಿ-೫೧೭೫೦೭

Edited ar^ published on behalf of T T Devasthanams by K. Subba Rao, M.A, and Printed at T T D Press
by M. Vijayakumar Reddy, Manager T T D Press Tirupati - 517 507

